


ವಿವೇಚನ ಗ್ರಂಥಮಾಲಾ ೨.

# "ನನ್ನ ಅನುಭವ"

ಅಥವಾ

## "ಸುಖದುಃಖಗಳ ವಿಮರ್ಶೆ"

(ಸತ್ಯಸನ್ಯಾಸಸಹಿತವಾಗಿ.)



ಗ್ರಾಮಂ. ನರಸಿಂಹಾಚಾರ್ಯ, ಬೀರೂರು
ಇವರಿಂದ ರಚಿಸಲ್ಪಟ್ಟುದು.



ಪ್ರಥಮ ಮುದ್ರಣ ೫೦೦ ಪ್ರತಿಗಳು





ಇದು ಉಡುಪಿ "ಪ್ರಭಾಕರ ಮುದ್ರಾಯಂತ್ರ"ದಲ್ಲಿ
ಪ. ನಾರಾಯಣ ಪ್ರಭುರಿಂದ ಮುದ್ರಿಸಲ್ಪಟ್ಟಿತು.

೧೯೨೩.



ಬೆಲೆ: ೦—೬—೦.

# ಪೀಠಿಕೆ.

ಈಪುಸ್ತಕವನ್ನು ಎರಡು ಮುಖ್ಯೋದ್ದೇಶಗಳಿಂದ ಬರೆಯಲು ಮೊದಲು ಮಾಡಿದೆನು. ಅದರಲ್ಲಿ ಮೊದಲನೆಯ ಉದ್ದೇಶ್ಯವು ಪುಸ್ತಕವನ್ನು ಬರೆಯಲು ಆರಂಭಿಸಿದಾಗ ಇದ್ದದ್ದು, ಪುಸ್ತಕವು ಪೂರ್ತಿಯಾದನಂತರ ವ್ಯತ್ಯಾಸವಾಯಿತು. ಆದುದರಿಂದ ನಮಗೆ ಮೊದಲು ತೋರಿದ ಉದ್ದೇಶ್ಯವನ್ನು ಸೂಚಿಸೋಣವೆ, ಅಥವಾ ಎರಡನೆಯಸಾರಿ ತೋರಿದ ಉದ್ದೇಶ್ಯವನ್ನು ಸೂಚಿಸೋಣವೇ? ಎಂಬುದು ಅನುಮಾನಕ್ಕಿಟ್ಟಿ. ಕೊನೆಗೂ ನಮಗೆ ಇಂತಹುದನ್ನೇ ಸೂಚಿಸಬೇಕೆಂಬುದನ್ನು ನಿಷ್ಕರ್ಷಿಸಲು ಸಾಧ್ಯವಿಲ್ಲದೆ ಹೋಯಿತು. ಆದುದರಿಂದ ಆ ಮೊದಲನೆಯ ಉದ್ದೇಶ್ಯದ ವಿಷಯವನ್ನು ವಾಚಕರ ಪಾಲಿಗೇನೇ ಬಿಟ್ಟಿರುತ್ತೇನೆ.



ಇನ್ನು ಎರಡನೆಯ ಉದ್ದೇಶ್ಯವು— ಜನಗಳಲ್ಲಿ ವಿವೇಚನಾಶಕ್ತಿಯನ್ನುಂಟುಮಾಡುವುದು ಮತ್ತು ಸತ್ಯಸನ್ಯಾಸದ ಸ್ವರೂಪವನ್ನು ತಿಳಿಸುವುದು. ಈ ಉದ್ದೇಶ್ಯಗಳನ್ನು ನೆರವೇರಿಸುವುದಕ್ಕೆ ತಕ್ಕಷ್ಟು ಅವಕಾಶಗಳು ಇದರಲ್ಲಿ ತಿಳಿಸಲ್ಪಟ್ಟಿವೆಯೆಂದು ಹೇಳಬಹುದು.

ವಾಚಕರು ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದಿ, ಇದರಲ್ಲಿರತಕ್ಕ ಗುಣಗಳನ್ನು ಮಾತ್ರ ಗ್ರಹಿಸಿ ಮೇಲಿನ ಉದ್ದೇಶ್ಯಗಳು ನೆರವೇರುವಂತೆ ಮಾಡಿದರೆ, ಅಲ್ಲಿಗೆ ಗ್ರಂಥಕರ್ತನ ಶ್ರಮವು ಸಾರ್ಥಕವಾಯಿತೆಂದು ತಿಳಿಯುತ್ತೇನೆ. ಗುಣಜ್ಞರು ಇದರಲ್ಲಿರುವ ದೋಷಗಳನ್ನು ತೋರಿಸಿಕೊಟ್ಟರೆ ಅವುಗಳನ್ನು ಕೃತಜ್ಞತೆಯಿಂದ ದ್ವಿತೀಯ ಮುದ್ರಣದಲ್ಲಿ ಸರಿಪಡಿಸುತ್ತೇನೆ.

ಇತಿ ತಮ್ಮವಿಧೇಯ,

**ಗ್ರಂಥಕರ್ತ.**

ಶ್ರೀರಸ್ತು.

## ಅಧ್ಯಾಯ ೧

ನಾನೊಬ್ಬ ಬ್ರಾಹ್ಮಣ. ನನಗೀಗ 39 ವರ್ಷಗಳು. ನಾನೊಬ್ಬ ಬಡ ವೈದಿಕರ ಮನೆಯಲ್ಲಿಯೇ ಹುಟ್ಟಿದವನು. ಅಂದರೆ ಅಷ್ಟೇನೂ ಬಡವನಲ್ಲ; ತಿನ್ನುವುದಕ್ಕೂ ಉಡುವುದಕ್ಕೂ ತಕ್ಕಷ್ಟು ಇದ್ದಿತು. ನಮ್ಮ ತಂದೆಗೆ ಮೈಸೂರಿನಲ್ಲಿ 30/– ರೂ. ನ ಕೆಲಸ ಒಂದಿದ್ದಿತು. ನಾನು ಹುಟ್ಟಿದ ಏಳುವರ್ಷಗಳ ವರೆಗೆ ಏನೇನು ಕಷ್ಟಸುಖಗಳನ್ನನುಭವಿಸಿದೆನೆಂದು ನನಗೆ ಚೆನ್ನಾಗಿ ನೆನಪಿಲ್ಲ. ಆದರೂ ನಮ್ಮ ಮನೆಯಲ್ಲಿ ಮಕ್ಕಳು ಪಡುವ ಕಷ್ಟವನ್ನು ನೋಡಿದರೆ ನಾನೂಸಹ ಅಗತ್ಯ ಹಾಗೆಯೇ ಕಷ್ಟಸುಖಗಳನ್ನುಪಟ್ಟೇ ಇರಬೇಕೆಂದು ಹೇಳಬಹುದು. ಇರಲಿ; ಹೇಗೂ ನನ್ನ ಅನುಭವಗಳನ್ನೆಲ್ಲಾ ನಿಮಗೆ ಹೇಳಲೇ ಬೇಕಾಗಿದೆಯಷ್ಟೆ? ನಾನು ಚಿಕ್ಕವನಾಗಿದ್ದಾಗ ಏನೇನು ಕಷ್ಟ ಸುಖಗಳನ್ನು ಅನುಭವಿಸಿರಬಹುದೆಂಬುದನ್ನು ಊಹಿಸತಕ್ಕಸಂದರ್ಭವೊಂದು ಚೆನ್ನಾಗಿ ಒದಗಿತು. ನನಗೊಬ್ಬ 4 ವರ್ಷದ ಗಂಡುಮಗುವಿದೆ. ಒಂದು ದಿನ ರಾತ್ರೆ ಎಲ್ಲರೂ ಮಲಗಿದನಂತರ 11 ಘಂಟೆ ಸಮಯ; ಎಲ್ಲರಿಗೂ ನಿದ್ರೆ ಹತ್ತಿದೆ; ಮಗುವು ಕಿರ್ರ್ ಎಂದಿತು; ನಾನು ಮಲಗಿಕೊಳ್ಳೆಂದು ಗದರಿಸಿದೆ; ಮಗುವು ಅಳುವುದನ್ನು ಹೆಚ್ಚುಮಾಡಿತು. ಪುನಃ ಚೆನ್ನಾಗಿ ಬೈದೆ; ಇನ್ನೂ ಗಟ್ಟಿಯಾಗಿ ಅರಚುವುದಕ್ಕೆ ಮೊದಲು ಮಾಡಿತು; ನನಗೆ ಸಿಟ್ಟೇರಿತು; ಸರಿ, ಇನ್ನೇನು ಗೊತ್ತೇಇದೆ. ಸಿಟ್ಟು ಏರಿತೆಂದರೆ ನಾವು ಮಾಡುವುದೇನು? ಹಸ್ತಪ್ರಹಾರವಲ್ಲವೆ? ಅದೂ ಆಯಿತು; ಮನೆಯೆಲ್ಲವೂ ಹಾರಿಹೊಗುವಂತೆ ಮಗುವು ಅಳುವುದಕ್ಕೆ ಪ್ರಾರಂಭಮಾಡಿತು; ಆಗ ನನ್ನ ಹೆಂಡತಿಯು "ಬಾರಪ್ಪಾ" ಎಂದುಹೇಳಿ ಹತ್ತಿರ ಕರೆದುಕೊಂಡಳು; ಕೊಂಚಹೊತ್ತು ಸುಮ್ಮನಾದ; ಪುನಃ ಅವನಿಗೇನುಬೇಕಾಯಿತೋ? ಏನು ಯೋಚಿಸಿದನೋ? ಪುನಃ ಅತ್ತನು; ಆಗ ತಾಯಿಯೂ ಶುಂಡ "ಥೂ ಮುಂಡೆಗಂಡ, ಮಲಗಿಕೊಳ್ಳೋ" ಎಂದಳು. ಅಳುವಿಕೆಯನ್ನು ಹೆಚ್ಚುಮಾಡಿದ; ಅಲ್ಲಿಯೂ ಒಂದು ಪ್ರಹಾರವಾಯಿತು. ಆಮೇಲೆ ಅಕ್ಕನಬಳಿಗೆ ಹೋಗಬೇಕೆಂದ; ಅಲ್ಲಿಗೂ ಕಳುಹಿಸಿದ್ದಾಯಿತು;

ಕೊಂಚಸುಮ್ಮನಿದ್ದು ಪುನಃ ಅಳಲಿಕ್ಕೆ ಮೊದಲಿಕ್ಕಿದ; ಆಗ ಅವಳೂ ಸಹ "ಒಳ್ಳೇ ಅನಿಷ್ಟ ಮುಂಡೇಗಂಡನಪ್ಪಾ! ಅಳುವುದನ್ನು ಕಲಿತುಬಿಟ್ಟ" ಎಂದಳು. ಆಗ ಪುನಃ ನನ್ನಲ್ಲಿಗೇನೇ ಬಂದು ಮಲಗಿಕೊಂಡ ....ಹಾಗೂ ಹೀಗೂನಿದ್ರೆ ಬಂದಿತು.

ಬೆಳಗಾಯಿತು. ಎದ್ದ ಒಡನೆಯೇ ತಿಂಡಿಬೇಕೆಂದು ತಾಯಿಯನ್ನು ಪೀಡಿಸಿದ; ಅವಳು ಇನ್ನೂ ಮಾಡುತ್ತಿದ್ದಳಾಗಿ ಕೊಡುತ್ತೇನೆಂದು ಹೇಳುತ್ತಾ ಹಿಂದುಮುಂದಕ್ಕೆ ತಿರುಗಾಡುತ್ತಿದ್ದಳು. ಇವನು ಅಳಿಗೆಯನ್ನು ಹೆಚ್ಚು ಮಾಡಿದ; ಒಂದುಪ್ರಹಾರ ಬಿತ್ತು; ಬಲವಾಗಿ ಅತ್ತ; ಅಷ್ಟುಹೊತ್ತಿಗೆ ಅವನ ಕೈಗೆ ತಿಂಡಿಯನ್ನು ಕೊಟ್ಟಳು; ಅಳಿಗೆಯನ್ನು ನಿಲ್ಲಿಸಿದ; ಆಮೇಲೆ ಕೊಂಚ ಹೊತ್ತಿನಮೇಲೆ ಎಣ್ಣೆಹಾಕುವುದಕ್ಕೆ ಮೊದಲುಮಾಡಿದಳು; ಆಗ ನಡೆದದ್ದೂ ಹಿಂದಿನ ಸಂಗತಿಗಳೇ; ಪುನಃ ಮಧ್ಯಾಹ್ನ ತಲೆಬಾಚಿದಳು; ಪುನಃ ನಡೆದದ್ದೂ ಬೆಳಗಿನ ಸಂಗತಿಗಳೇ. ಅಂತೂ ಒಟ್ಟನಲ್ಲಿ ಆದದ್ದೇನು? ಅವನಿಷ್ಟದಂತೆ ನಾವು ಹೋಗುವಂತಿಲ್ಲ; ಅಥವಾ ಅವನಿಗೆ ಬೇಕಾದುದು ನಮಗೆ ಗೊತ್ತಾಗಲಿಲ್ಲ; ಅವನು ಏಟುತಿಂದು ಅಳುವುದು ತಪ್ಪುವುದಿಲ್ಲ; ನಮಗೂ ಹಿಂಸೆ ತಪ್ಪುವುದಿಲ್ಲ. ಇಷ್ಟಾದರೂ ಮಕ್ಕಳಾಗಬೇಕೆಂಬುವುದು ತಪ್ಪವಂತಿಲ್ಲ; ಆ ಮಕ್ಕಳಿಗೆ ಹಿಂಸೆಕೊಡುವುದೂ ತಪ್ಪವಂತಿಲ್ಲ. ಆದರೆ ನೀವು ಒಂದುಮಾತನ್ನು ಕೇಳಬಹುದು.– "ಮಗುವಿಗೆ ಎಣ್ಣೆಹಾಕುವುದು ತಲೆಬಾಚುವುದು ಇವೆಲ್ಲಾ ಆ ಹುಡುಗನ ಅಭಿವೃದ್ಧಿಗಳಲ್ಲವೇ?" ಎಂದು ಕೇಳಬಹುದು. ಅದಂತೂ ಅವನ ಅಭಿವೃದ್ಧಿಗೆ. ಆದರೆ ರಾತ್ರಿ ಹೊಡೆದದ್ದೊ? ಬೆಳಗ್ಗೆ ತಿಂಡಿಗೆ ಸಿದ್ಧಮಾಡಿಡುವುದಕ್ಕೆ ಶಕ್ತಿಇಲ್ಲದೆ ಹೊಡೆದಾಗಲೊ? ಆಗಲೂ ಅಭಿವೃದ್ಧಿಯೊ? ಅಂತೂ ಒಟ್ಟನಲ್ಲಿ ಮಕ್ಕಳು ದೊಡ್ಡವರಾಗ ಬೇಕಾದರೆ ಇಷ್ಟುಮಟ್ಟಿನ ಸುಖಪಟ್ಟಲ್ಲದೆ ದೊಡ್ಡವರಾಗುವಂತಿಲ್ಲವೆಂಬು ಗೊತ್ತಾಯಿತು. ಸರಿ. ನಾನಾದರೂ ಏಳು ವರ್ಷಗಳವರೆಗೆ ಹಾಗೆಯೇ ಬೆಳೆದಿ-ಬೇಕೆಂದು ಊಹಿಸುತ್ತೇನೆ.

ಇನ್ನುಮುಂದಲ ವಿಷಯವನ್ನು ನೋಡೋಣ. ಆಮೇಲೆ ನನಗೆ ಉಪನಯನವಾಯ್ತು. ಅಂದರೆ ಗರ್ಭಾಷ್ಟಮದಲ್ಲೇ ಆಯಿತು. ಇದರಮಧ್ಯೆ ಒಂದುವಿಷಯವನ್ನು ಹೇಳಲು ಮರೆತುಬಿಟ್ಟೆ. ನನಗೆ ಐದುವರ್ಷವಾ

ಗುತ್ತಲೇ ನನ್ನನ್ನು ಸ್ಕೂಲಿಗೆ ಕಳುಹಿಸಲು ಮೊದಲುಮಾಡಿದರೆಂದು ತೋರುತ್ತದೆ. ಏಕೆಂದರೆ ನನಗೇನೋ ಇಷ್ಟೇವರ್ಷಕ್ಕೆ ಸ್ಕೂಲಿಗೆ ಕಳುಹಿಸಿದರೆಂಬುದು ನೆನಪಿಲ್ಲ. ಆದರೆ ನನಗೆ ಉಪನಯನವಾಗುವ ವೇಳೆಗೆ ಕನ್ನಡ ಒಂದನೆ ತರಗತಿಯನ್ನು ಪೂರೈಸಿದ್ದೆ. ಆದುದರಿಂದಲೇ ಹಾಗೆ ಊಹಿಸಿದೆನು.

ಉಪನಯನವಾಯಿತು. ಇನ್ನೂ ನಮ್ಮತಂದೆಯವರು ವೈದಿಕರಾಗಿದ್ದುದರಿಂದ ನನ್ನನ್ನು ನಿತ್ಯವೂ ಒಂದುಘಂಟೆಕಾಲ ಅಧ್ಯಯನಕ್ಕೆ ಕಳುಹಿಸುತ್ತಿದ್ದರು. ಆಗ ನನ್ನ ವೇಳಾಪದ್ಧತಿಯು ಹೀಗಿತ್ತು.– ಬೆಳಗ್ಗೆ ಸ್ನಾನ ಸಂಧ್ಯಾವಂದನೆ. ಅಧ್ಯಯನದ ವಾಧ್ಯಾರಮನೆಗೆ ಹೋಗುವುದು. ಆಮೇಲೆ ಕೊಂಚ ಓದಿಕೊಳ್ಳುವ ಶಾಸ್ತ್ರ. ಸ್ಕೂಲು. 5ಗಂಟೆಮೇಲೆ ಆಟಪಾಟಗಳು. ಆರುಘಂಟೆಯಮೇಲೆ ಯಥಾಸ್ಥಿತಿ ಸಂಧ್ಯಾವಂದನೆ ಊಟ ಇತ್ಯಾದಿಗಳು.

ಇಷ್ಟರಲ್ಲಿ ನನಗೆ ಇಂಗ್ಲಿಷ್ 1ನೇಕ್ಲಾಸಿಗೆ ಪ್ಯಾಸಾಯಿತು. ಅಲ್ಲಿಂದ ನನ್ನ ಗೋಳಿಗೆ ಆರಂಭ. ಇಂಗ್ಲಿಷ್ ಪಾಠ ಪರಭಾಷೆಯಾದುದರಿಂದ ಓದದೆ ಬರುತ್ತಿರಲಿಲ್ಲ. ಜತೆಗೆ ಭೂಗೋಳ, ಚರಿತ್ರೆ, ವ್ಯಾಕರಣ,— ಒಂದಕ್ಕಿಂತ ಒಂದು ಕಷ್ಟ. ಎಲ್ಲವನ್ನೂ ಚೆನ್ನಾಗಿ ಓದಬೇಕು. ನಾನು ಇಷ್ಟು ದಿವಸ ಕಾಲಕಳೆದಹಾಗೆಯೇ ಆಗಲೂ ಕಾಲಹರಣಕ್ಕೆ ಆರಂಭಮಾಡಿದೆ. ಸ್ಕೂಲಿನಲ್ಲಿ ಪಾಠ ಒಪ್ಪಿಸಲಿಲ್ಲ. ಸರಿ. ಇನ್ನೇನು? ಅಲ್ಲಿ ಹೊಡೆತಕ್ಕೆ ಆರಂಭ. ಇಲ್ಲಾ ಸಾರ್! ಎನ್ನುವುದು ಅಳುವುದು. ಆದರೆ ಮಾರನೆಯದಿವಸ ಹಿಂದಿನಂತೆಯೇ. ಇದರ ಮಧ್ಯೆ ನಮ್ಮ ತಂದೆಯವರು ನಮ್ಮ ಮಾಷ್ಟರನ್ನು ನಮ್ಮ ಹುಡುಗನು ಹೇಗಿದ್ದಾನೆಂದು ಕೇಳಿದರು. ಅವರು ಏನೂಉಪಯೋಗವಿಲ್ಲವೆಂದರು. ಸರಿ. ನಾನು ಮನೆಗೆಬಂದೆನೆಂದರೆ “ಅಯ್ಯೋ ಮುಂಡೆಮಗನೆ, ಅನ್ಯಾಯವಾಗಿ ಹಾಳಾಗಿ ಹೋಗುತ್ತಿಯಲ್ಲೋ? ನಾಳೆ ಹೊಟ್ಟೆಗಿಲ್ಲದೆ ಅಲೆಯಬೇಕು. ಕಂಡ ಕಂಡವರಲ್ಲೆಲ್ಲಾ ಯಾಚನೆ ಮಾಡಬೇಕು. ಹೆಂಡತಿ ಮಕ್ಕಳಲ್ಲಿ ಬೈಸಿಕೊಳ್ಳಬೇಕು. ಅಂತೂ ನಿನ್ನ ಪಾಡು ನಾಯಿ ಪಾಡೇ ಆಗುವುದು. ಚೆನ್ನಾಗಿ ಇಂಗ್ಲಿಷ್ ಓದಿ ಪ್ಯಾಸುಮಾಡಿದೆಯೆಂದರೆ ತಿಂಗಳಿಗೆ 200-300 ರೂಪಾಯಿ ಸಂಬಳ ತೆಗೆದುಕೊಂಡು **ದೊರೆಜೀವನಮಾಡುತ್ತಾ ಸುಖವಾಗಿರಬಹುದು.** ಚೆನ್ನಾಗಿ ಓದೋ” ಎಂದುಹೇಳಿ ಮೊದಲನೆಯದಿವಸ ಬೈದು ಹೇಳಿದರು. ನಾನೇನು ಕೇಳಿದೆನೇನು? ಕಿವಿಯ ಮೇಲೆ

ಯೇ ಹಾಕಿಕೊಳ್ಳಲಿಲ್ಲ. ಏಕೆ? ಓದಬೇಕಲ್ಲಾ! ಆಕಷ್ಟವ್ರೋ? ಯಥಾಸ್ಥಿತಿ ಸ್ಕೂಲಿನಲ್ಲಿ ಏಟು ಬೀಳುತ್ತಲೇ ಇತ್ತು. ಆಗ ಚೆನ್ನಾಗಿ ಅತ್ತುಬಿಡುತ್ತಲೂ ಇದ್ದೆ. ಆಮೇಲೆ ಅದರ ಜ್ಞಾಪಕವೇ ಇಲ್ಲ. ಹೀಗೆಯೇ ಒಂದು ವಾರ ಕಳೆಯಿತು. ನಮ್ಮ ತಂದೆಯುವರು ನಮ್ಮ ಮಾಸ್ಟರನ್ನು ಪುನಃ ಕಂಡರು. ಇನ್ನೇನು? ಮಾಸ್ಟರು ಹೇಳುವುದು ಗೊತ್ತೇ ಇದೆ. ಸರಿ. ಅಲ್ಲಿಂದ ಆರಂಭವಾಯಿತು. ಮನೆಗೆ ಬಂದರೆ ಹೊಡೆತ. ಸ್ಕೂಲಿಗೆ ಹೋದರೆ ಹೊಡೆತ. ನನಗೆ ಬೇರೆ ಉಳಿಗಾಲವಾಗಲಿಲ್ಲ. ಆದದ್ದಾಗಲಿ, ಓದಿ ಕಷ್ಟ ಪಡಲೇಬೇಕೆಂದು ಸಿದ್ಧಾಂತ ಮಾಡಿದೆ. ಸರಿ. ಆದಿವಸದಿಂದ ಎರಡು ಕಡೆಯಲ್ಲೂ ಏಟೇನೋ ನಿಂತಿತು. ಗೌರವವೂ ಬಂತು. ಓದುವಾಗಮಾತ್ರ ಪ್ರಾಣ ಹೋಗುತ್ತಿತ್ತು. ಇರಲಿ.

---

## ಅಧ್ಯಾಯ ೨

ಹೀಗೆಯೇ ಲೋಅರ್ ಸೆಕೆಂಡರಿ, ಮೆಟ್ರಿಕ್ಯುಲೇಷನ್ ಆಯಿತು. ಈ ಪರೀಕ್ಷೆಗಳಿಗೋಸ್ಕರ ನಾನು ಕಷ್ಟಪಟ್ಟದ್ದನ್ನೆಲ್ಲಾ ನಿಮ್ಮಲ್ಲಿ ವಿವರಿಸುವಂತಿಲ್ಲ. ರಾತ್ರೆ ನಿದ್ದೆ ಇಲ್ಲ, ಮನಸ್ಸಿಗೆ ಆನಂದವಿಲ್ಲ, ಊಟಬೇಕಿಲ್ಲ, ತಿಂಡಿಬೇಕಿಲ್ಲ, ಆಟವಂತೂ ಇಲ್ಲವೇ ಇಲ್ಲ. ಇಷ್ಟೆಲ್ಲಾ ಕಷ್ಟಪಟ್ಟು **ಅದಾವ ಸುಖವನ್ನು ಪಡೆಯಬೇಕೋ!** ಯಾರುಬಲ್ಲವರು? ಆಮೇಲೆ ಇನ್‌ಟರ್‌ಮೀಡಿಯಟ್ ಪರೀಕ್ಷೆಗೆ ಓದಬೇಕು. ಅದರಲ್ಲೂ ಮೊದಲುವರ್ಷ ಪ್ಯಾಸಾಯಿತು. ಇನ್ನು 2ನೇವರ್ಷ—ನನ್ನ ಗ್ರಹಚಾರ.— ಈಗಲೂ ಆ ಸಂದರ್ಭವನ್ನು ಜ್ಞಾಪಿಸಿಕೊಂಡರೆ ನನ್ನ ಮೈ ನಡುಗುವುದು. ನನ್ನ ಪರೀಕ್ಷೆ ಫೈಲಾಗಿ ಹೋಯಿತೆಂದು ತಿಳಿಯಿತು. ಅದನ್ನು ಕೇಳಿದ್ದೇ ತಡ. ನನಗೇನೂ ತೋರಲಿಲ್ಲ. ನಾನೇ ಭೂಮಿಯಮೇಲಿದ್ದೆನೋ! ನನ್ನಮೇಲೆ ಭೂಮಿಇದ್ದಿತೋ! ಯಾರಿಗೆ ಗೊತ್ತು. ಸರಿ. ಹಾಗೂ ಹೀಗೂ ಯಾರಿಗೂ ಮುಖವನ್ನು ತೋರಿಸದೆ ಮನೆಗೆ ಬಂದೆನು. ಯಾರಲ್ಲಿಯೂ ಮಾತಾಡಲಿಲ್ಲ. ಸುಮ್ಮನೆ ಒಂದುಕಡೆ ಮುಖಮುಚ್ಚಿಕೊಂಡು ಕುಳಿತುಕೊಂಡೆ. ಇಷ್ಟು ಹೊತ್ತಿಗೆ ನಮ್ಮತಂದೆಯುವರು ಆಗಲೇಹೋಗಿ ರಿಸಲ್ಟಿನ ಬೋರ್ಡಿನಲ್ಲಿ ನನ್ನ ರಿಜಿಸ್ಟರ್ ನಂಬರನ್ನೂ ಹೆಸರನ್ನೂ ನೋಡಿ

ಕೊಂಡುಬಂದು ಬಿಟ್ಟಿದ್ದಾರೆ. ಅವರಿಗೆ ನನ್ನ ಮೇಲಿನ ಸಿಟ್ಟನ್ನು ಇಷ್ಟೆಂದು ಹೇಳಿತೀರದು. ಅಲ್ಲಿಂದಲೇ ಮುಖದಿಂದ ಕೆಂಡವನ್ನುಸುರಿಸುತ್ತಾ ಮನೆಯೊಳಕ್ಕೆ ಬಂದರು. ಬಂದವರೇ ನಮ್ಮ ತಾಯಿಯಲ್ಲಿ "ಎಲ್ಲಿ, ಆ ಮನೆಹಾಳಮುಂಡೆಗಂಡನು ಎಲ್ಲಿಹೋದ? ಪರೀಕ್ಷೆಯಲ್ಲಿ ಫೈಲಾಗಿ ಬಿಟ್ಟ. ನಿತ್ಯವೂ ಚೆನ್ನಾಗಿ ಓದೋ ಓದೋ ಎಂದು ಎಷ್ಟೋಹೇಳಿದೆ. ನನ್ನಮಾತು ಕೇಳಲಿಲ್ಲ. ಆಟವಾಡಿದ. ಫೈಲಾಗಿಬಿಟ್ಟ! ಅವನಿಗೆ ಹೋದದ್ದೇನು? ನಮಗಲ್ಲವೇ ಇಷ್ಟುದುಡ್ಡು ಖರ್ಚಾಯಿತು. ಇವನಿಗೋಸ್ಕರ ಎಷ್ಟುಜನಗಳಲ್ಲಿಹೋಗಿ ಫ್ರೀಷಿಪ್ ಮಾಡಿಸಿದ್ದೆ! ನಾನು ಅಲೆದದ್ದಕ್ಕೂ ಜನಗಳನ್ನು ಆಶ್ರಯ ಮಾಡಿದ್ದಕ್ಕೂ ಕಡೆಮೊದಲಿಲ್ಲ. ಎಲ್ಲವನ್ನೂ ಹಾಳು ಮಾಡಿಬಿಟ್ಟ. ದ್ರವ್ಯನಷ್ಟ ಕಾಲನಷ್ಟ. ಸರಿ. ಇನ್ನುಮುಂದೆ ಫ್ರೀಷಿಪ್ಪನ್ನು ಸರಕಾರದವರು ಕೊಡುವಂತಿಲ್ಲ. ನಮ್ಮ ಕೈಲಿ ಫೀಸುಕೊಡುವುದಕ್ಕೆ ಶಕ್ತಿಯಿಲ್ಲ.................. ಇತ್ಯಾದಿಯಾಗಿಹೇಳಿ ಬೈಯ್ಯುತ್ತಿದ್ದರು.

ನಮ್ಮ ತಂದೆಯವರ ಆಶೀರ್ವಾದವೆಲ್ಲವೂ ಆದಮೇಲೆ ನಮ್ಮ ತಾಯಿಯ ಆಶೀರ್ವಾದವೂ ಆಗಬೇಕಷ್ಟೆ! ಅವರೂ ಆರಂಭಮಾಡಿದರು. ನೀವು ಹೇಳಿದಷ್ಟೇ ನಷ್ಟವಾಗಿದ್ದರೆ ಅದನ್ನಾದರೂ ಸಹಿಸಬಹುದಾಗಿತ್ತು. ಅಷ್ಟೇಅಲ್ಲ; ಇವನು ಪ್ಯಾಸುಮಾಡಿದ್ದರೆ ಲಾಯರ್ ಕೃಷ್ಣಯ್ಯಂಗಾರರು ರೂ. 1000/–ವನ್ನು ವರದಕ್ಷಿಣೆಯನ್ನು ಕೊಟ್ಟು ಕನ್ಯಾದಾನಮಾಡುತ್ತಿದ್ದರು. ಜತೆಯಲ್ಲಿ ಬೇಕಾದಷ್ಟು ಬೆಳ್ಳಿಪಾತ್ರೆಗಳು, ಇತರ ಬಟ್ಟೆಬರೆ ವಗೈರೆಗಳೆಲ್ಲವೂ ಬರುತ್ತಿದ್ದುವು. ಇವನಿಗೆ ಅವರು ತಿಂಗಳುತಿಂಗಳಿಗೆ ಫೀಸ್‌ಕೊಟ್ಟು ಇನ್ನೂ ಮುಂದಕ್ಕೆ ಓದಿಸುತ್ತಿದ್ದರು. ಇವನ ಊಟತಿಂಡಿ ಇತ್ಯಾದಿಗಳಿಗೆ ಯಾವ ಯೋಚನೆಯೂ ಇರುತ್ತಿರಲಿಲ್ಲ. ನಮಗೂ ಭಾರ ತಪ್ಪುತ್ತಿತ್ತು.............ಇತ್ಯಾದಿಯಾಗಿ ಅವರದೂ ಒಂದು ಅಷ್ಟೋತ್ತರವಾಯಿತು.

ವಾಚಕರೆ! ಇದನ್ನೆಲ್ಲಾ ಕೇಳುತ್ತಿದ್ದ ನನ್ನ ಸ್ಥಿತಿಯು ಹೇಗಾಗಿದ್ದಿರಬಹುದು? ಯೋಚಿಸಿರಿ. ನಾನು ಕೇಳಿದ್ದನ್ನೆಲ್ಲಾ ನಿಮಗೂ ಬಿಡದೆ ಹೇಳಿದ್ದೇನೆ. ನಾನು ನಿಮ್ಮಲ್ಲಿ ನಿಜವನ್ನು ಹೇಳಿದರೂ ನಂಬುತ್ತೀರಿ. ಸುಳ್ಳನ್ನು

ಹೇಳಿದರೂ ನಂಬುತ್ತೀರಿ. ಅಥವ ನಿಮಗೆ ಸುಳ್ಳುಹೇಳಿ ನನಗಾಗುವ ಪ್ರಯೋಜನವೇನು? ಏನೂ ಇಲ್ಲವಷ್ಟೆ? ನಾನು ನಿಜವಾಗಿಯೂ ಈ ಪರೀಕ್ಷೆ ಗೋಸ್ಕರ ಎಷ್ಟು ಕಷ್ಟಪಟ್ಟೆನೆಂದರೆ ಅದನ್ನು ಬಾಯಲ್ಲಿ ವಿವರಿಸುವಂತಿಲ್ಲ. ನನ್ನ ಹಿಂದಿನ ಪರೀಕ್ಷೆಗಳಿಲ್ಲಕ್ಕಿಂತಲೂ ಹೆಚ್ಚಾಗಿಯೇ ಕಷ್ಟಪಟ್ಟು ಓದಿದೆನು. ಆ ನನ್ನ ಕಷ್ಟವೆಲ್ಲವೂ ಆ ಪರಮಾತ್ಮನೊಬ್ಬನಿಗೇ ಗೊತ್ತು. ಆದರೇನು? ನನ್ನ ಗ್ರಹಚಾರ. ಆ ಪರೀಕ್ಷೆವೇಳೆಯಲ್ಲಿ ಒಂದು ಸಬ್ಜಕ್ಟಿನಲ್ಲಿ ಸ್ವಲ್ಪ ತೋರದೇ ಹೋಯಿತು. ಕೊಂಚಹೊತ್ತಿನಮೇಲೆ ಸ್ಫೂರ್ತಿಯೂ ಆಯಿತು. ಆದರೇನು? ಅಷ್ಟು ಹೊತ್ತಿಗಾಗಲೇ ಗಂಟೆ ಆಗಿಯೇಆಯಿತು. ಆಗಲೇ ನನಗೆ ಕೊಂಚ ಅನುಮಾನವಾಯಿತು. ಆದರೂ ಒಟ್ಟಿನಲ್ಲಿ ಪ್ಯಾಸಾಗಬಹು ದೆಂದು ಯೋಚಿಸಿದ್ದೆ. ಆದರೆ ನನ್ನ ಹಣೆಬರಹಮಾತ್ರ ಹಾಗಾಗಲಿಲ್ಲ. ಇಷ್ಟೆ ಲ್ಲಾ ಆದಮೇಲೆ ನನಗೆ ಊಟ ತಿಂಡಿ ನಿದ್ರೆ ಇಲ್ಲವೇ ಇಲ್ಲವೆನ್ನುವುದು ನಿಮಗೂ ಗೊತ್ತಿರಬಹುದು. ಹಾಗೂ ಹೀಗೂ ಆ ದಿವಸವನ್ನು ಕಳೆದದ್ದಾಯಿತು. ಮಾರನೇದಿವಸ ನಮ್ಮ ಊರಿನವರಿಗೆಲ್ಲಾ ನಮ್ಮ ಫಲಿತಾಂಶವು ತಿಳಿಯಿತು. ನಮ್ಮ ಉಪಾಧ್ಯಾಯರು ಮತ್ತೂ ನಮ್ಮಸ್ನೇಹಿತರೂ ಸಹ ನನಗೆ ಫೈಲ್ ಆದ್ದನ್ನನೋಡಿ "ಇದೇನು, ಅಂಥವನೂ ಫೈಲಾದನೆ? ಬುದ್ಧಿವಂತ; ಯಾವಾಗಲೂ ವ್ಯಾಸಂಗಮಾಡುತ್ತಿದ್ದನು. ಮೇಲಾಗಿ ಇತರಹವ್ಯಾಸಗಳಿಗೆ ಹೋಗುತ್ತಿರಲಿಲ್ಲ. ಇಂತಹನೇ ಹೀಗಾದರೆ ಇನ್ನು ಇತರರ ಪಾಡೇನು?" ಇತ್ಯಾದಿಯಾಗಿ ಹೇಳುತ್ತಿದ್ದುದು ಕೇಳಬಂತು. ಏನಾದರೇನು? ನನಗೆ ಮಾತ್ರ ಪಾಸಾಗುವಂತಿಲ್ಲ. ಇಷ್ಟುಹೊತ್ತಿಗೆ ನನ್ನ ತಂದೆತಾಯಿಗಳಿಗೆ ನಮ್ಮ ಜ್ಞಾತಿವರ್ಗದವರಲ್ಲಿ ಕೆಲವರಿಗೆ ಇಂಟರ್‌ಮಿಾಡಿಯಟ್ ಪರೀ ಕ್ಷೆಯು ಆಯಿತೆಂದು ತಿಳಿಯಿತು. ತಿಳಿದ ಒಡನೆಯೇ ನಮ್ಮ ತಂದೆ ತಾಯಿಗಳಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ಅಷ್ಟುಹೊತ್ತಿಗೆ ಸರಿಯಾಗಿ ನಾನೂ ಅಲ್ಲಿಗೆ ಹೋದೆನು. ಸ್ವಭಾವತಃ ಜನಗಳಲ್ಲಿ ಜ್ಞಾತಿ ಮಾತ್ಸರ್ಯವು ಹೆಚ್ಚು. ಇದರಮೇಲೆ ಅವರ ಮಕ್ಕಳಿಗೆಲ್ಲಾ ಪಾಸಾಗಿದೆ. ನನಗೆ ಫೇಲಾಗಿದೆ. ಇತರ ಕಷ್ಟ ನಷ್ಟಗಳು ಎಷ್ಟೋ ಆಗಿವೆ. ಇನ್ನೇನು ಕೇಳಬೇಕೇ? ಉರಿಯುವ ಬೆಂಕಿಗೆ ತುಪ್ಪವನ್ನು ಸುರಿದಂತೆಯೇ ಆಯಿತು. ನನ್ನನ್ನುನೋಡಿ ಪುನಃ ನಮ್ಮ ತಂದೆಯವರು ಸಹಸ್ರನಾಮಕ್ಕೆ ಆರಂಭ ಮಾಡಿದರು. ಇದನ್ನುಮಾತ್ರ ನಾನು ನಿಮಗೆ ವಿವರಿಸುವಂತಿಲ್ಲ. ಏಕೆಂದರೆ,

ಈಗಲೂ ನಾನು ಅದನ್ನು ಜ್ಞಾಪಿಸಿಕೊಂಡರೆ ನನ್ನ ಕಣ್ಣಿನಲ್ಲಿ ನೀರು ಬರುವುದು. ಆದರೆ ಇಷ್ಟುಮಾತ್ರ ಹೇಳುತ್ತೇನೆ.—ಮೊದಲನೇ ದಿವಸಕ್ಕಿಂತಲೂ ಬಲಿಷ್ಠವಾದ ಸಹಸ್ರನಾಮ; ಅಂದರೆ ಪುನಶ್ಚರಣೆಮಾಡಿದ ಒಡನೆಯೇ ಫಲಕ್ಕೆ ಬರುವಂಥಾದ್ದು. ಇದಾದ ಒಡನೆಯೇ ಅಂತಹುದೇ ನಮ್ಮ ತಾಯಿಯದೊಂದು ಅಷ್ಟೋತ್ತರವೂ ಆಯಿತು. ಅಂತೂ ತಾಯಿತಂದೆಗಳಿಬ್ಬರದೂ ಆಶೀರ್ವಾದಗಳಾದುವು. ಒಡನೆಯೇ ನಾನು ಮೇಲೆ ಹೇಳಿದಂತೆ ಫಲೋದಯವೂ ಆಯಿತು. ಎಲ್ಲಿ? ನನ್ನ ಮನಸ್ಸಿನಲ್ಲಿ. ಯಾವ ಫಲ ನಿಮಗೆಗೊತ್ತೋ? ಮತ್ತೇನೂ ಇಲ್ಲ. ಈ ಪ್ರಪಂಚದಲ್ಲಿ ನಾನು ಇನ್ನು ಇರಬಾರದೆಂಬ ಜಿಜ್ಞಾಸೆಯೇ.

---

## ಅಧ್ಯಾಯ ೩

ಇಷ್ಟಾದಮೇಲೆ ರಾತ್ರೆ 9 ಗಂಟೆವರೆಗೆ ಸುಮನಿದ್ದೆ. ನಾನು ಸಾಮಾನ್ಯವಾಗಿ ಬೀದಿಯ ಬಾಗಿಲ ಕೊಠಡಿಯಲ್ಲಿ ಮಲಗುವ ಪದ್ಧತಿ. ನಮ್ಮ ಮನೆಯವರೆಲ್ಲರೂ ಒಳಗಡೆಯೇ ಮಲಗುವ ಪದ್ಧತಿ. ಎಲ್ಲರೂ ಮಲಗಿಕೊಂಡಮೇಲೆ 9½—10ಗಂಟೆಯಾದ ಮೇಲೆ ಹೊರಕ್ಕೆ ಹೊರಟೆ. ಏತಕ್ಕೆನ್ನುವಿರೊ? ಹಿಂದೆಹೇಳಿದಂತೆ ಈ ಪ್ರಪಂಚವನ್ನು ಬಿಡುವುದಕೋಸ್ಕರ ನಮ್ಮ ಮನೆಗೆ 1½ಮೈಲಿ ದೂರದಲ್ಲಿದ್ದ ಕೆರೆಗೆ ಹಾರಿ ಪ್ರಾಣಬಿಡಬೇಕೆಂದು ಹೊರಟೆ. ಇಷ್ಟೆಲ್ಲಾ ಆದಮೇಲೆ ಮತ್ತೊಂದು ಯೋಚನೆಯುಂಟಾಯಿತು. ನಾನು ಹುಟ್ಟಿದಂದಿನಿಂದ ನನ್ನತಂದೆ ತಾಯಿಗಳಿಗೆ ನನ್ನ ಜೀವಮಾನದಲ್ಲಿ ಏನೂ ಉಪಕಾರವಾಗಲಿಲ್ಲ. ಎಷ್ಟೋ ಕಷ್ಟನಷ್ಟಗಳಾದುವು ಇನ್ನೂ ಈಗ ನಾನು ಆತ್ಮಹತ್ಯಮಾಡಿಕೊಂಡರೆ ನಾನು ಸತ್ತರೂ ಅವರಿಗೆ ತೊಂದರೆ ತಪ್ಪುವಂತಿಲ್ಲ. ಏಕೆಂದರೆ ಪೋಲೀಸಿನವರು "ತಂದೆ ತಾಯಿಗಳ ಹಿಂಸೆಯಿಂದ ನಾನು ಆತ್ಮಹತ್ಯೆಮಾಡಿಕೊಂಡೆ" ನೆಂದು ನಿಷ್ಕರ್ಷಿಸಿ ಅವರಿಗೇನಾದರೂ ತೊಂದರೆ ಕೊಟ್ಟೇಕೊಡುವರು. ಆದುದರಿಂದ ನಾನು ಬದುಕಿರುವಾಗಲಂತೂ ಉಪಕಾರಮಾಡಲಿಲ್ಲ; ಸತ್ತ ಮೇಲೂ ಉಪಕಾರಮಾಡುವಂತಿಲ್ಲ. ಇನ್ನೂ ಅಪಕಾರವನ್ನಾದರೂ ಏಕೆ ಮಾಡಬೇಕು?

ಇಷ್ಟು ಯೋಚಿಸಿ ಒಂದು ಕಾಗದದಲ್ಲಿ "ನಾನು ಮನಃಪೂರ್ವಕ ವಾಗಿ ಫೇಲಾದುದಕ್ಕೋಸ್ಕರಲೇ (ತಾಯಿತಂದೆಗಳ ಹಿಂಸೆಯಿಂದಲ್ಲಾ) ಕೆರೆಗೆ ಬಿದ್ದು ಸತ್ತಿರುತ್ತೇನೆ"...ಇತ್ಯಾದಿಯಾಗಿ ಬರೆದು ಪೋಲೀಸ್ ಆಫೀಸಿನ ವಿಳಾಸವನ್ನು ಬರೆದೆ. ಪೋಸ್ಟಾಫೀಸು ಹತ್ತಿರ ಇಲ್ಲದಿದ್ದುದರಿಂದಲೂ, ಕೆರೆಹತ್ತಿರಲೇ ಕಾಗದಹಾಕುವ ಗೋಟ್ಟ ಒಂದು ಇದ್ದಿತಾದ್ದರಿಂದಲೇ ಅಲ್ಲೀ ಹಾಕೋಣವೆಂದು ಜೇಬಿನೊಳಗಿಟ್ಟುಕೊಂಡು ಸುಮ್ಮನೇ ಯೋಚನೆ ಮಾಡುತ್ತಾ ಹೊರಟು ಹೋದೆ. ನಾನು ಏನೇನು ಯೋಚಿಸಿದೆನೋ ಅದೆಲ್ಲಾ ಈಗ ನನಗೆ ಜ್ಞಾಪಕವಿಲ್ಲ. ಅಂತೂ ಯೋಚಿಸುತ್ತಾ ಹೋದೆ. ಹಿಂದೆಮುಂದೆ ನೋಡಲಿಲ್ಲ. ಹೀಗೆಯೇ ಹೋದವನು ಸುಮ್ಮನೆ ಒಂದು ಮೈಲಿದೂರ ಹೊರಟು ಹೋಗಿಬಿಟ್ಟೆನು. ಆಗ ಇದ್ದಕ್ಕಿದ್ದಹಾಗೆಯೇ ತಂಪಾದ ಗಾಳಿಯು ಜೋರಾಗಿ ಬೀಸಿತು. ಬೀಸಿದ ಒಡನೆಯೇ ಏನೋ ಮನಸ್ಸಿಗೆ ತಡೆಯಾಗಿ, ಇದೇನು ನಾನು ಇಲ್ಲಿಗೆ ಬಂದೆನು? ಎಂದು ತೋರಿತು. ಆಗ ಅಲ್ಲಿಯೇ ನಿಂತುಕೊಂಡೆ, ನಾನು ಹೊರಟ ಉದ್ದೇಶ್ಯವು ನೆನಪಿಗೆ ಬಂದಿತು. ಹಾಗೆಯೇ ಕೆರೆಯ ಏರಿಯ ಮೇಲಕ್ಕೆ ಹೋದೆ. ಅಲ್ಲಿಯೇ ಸೋಪಾನಗಳ ಮೇಲೆ ಕೂತುಕೊಂಡೆ. ಇನ್ನು ಕೆರೆಗೆ ಬೀಳಬೇಕು. ಎಲ್ಲವೂ ನೆನಪಿಗೆ ಬಂದಿತು; ಕಣ್ಣಿನಲ್ಲಿ ನೀರು ಬಂದಿತು; ಹಾಗೆಯೇ ಯೋಚನೆ ಮಾಡಿದೆ. ಅದೇನು ಲೋಕದಲ್ಲಿ ಜನರೆಲ್ಲರೂ ಸುಖ-ಸುಖವೆಂದು ಹೇಳುತ್ತಾರೆ? ನನಗೆ ಮಾತ್ರ ಸುಖವು ತೋರಲೇ ಇಲ್ಲ. ಹೆಚ್ಚುಹೆಚ್ಚಾಗಿ ಓದಿದಷ್ಟು ಸುಖಪಡಬಹುದೆನ್ನುತ್ತಾರೆ. ನನಗೆ ಮಾತ್ರ ಕಷ್ಟವೇ ಕಾಣುತ್ತಿದೆ. ಈಗ ನನ್ನನ್ನೇ ನಾನು ಜ್ಞಾಪಿಸಿಕೊಳ್ಳುತ್ತೇನೆ. ನನಗೆ ಏಳು ವರ್ಷದೊಳಗಾದುದೇನೊ ನನಗೆ ಗೊತ್ತಿಲ್ಲ. ಆ ಮೇಲೆ ಪ್ರತಿವರ್ಷವೂ ಮೇಲಿನ ತರಗತಿಗೆ ಹೋಗಬೇಕು; ಮೇಲಿನ ತರಗತಿಗೆ ಹೋದಹಾಗೆಲ್ಲಾ ಪಾಠಗಳು ಕಠಿನ-ಕಠಿನವಾದಂತೆಲ್ಲಾ ಹೆಚ್ಚಾಗಿ ಓದಬೇಕು; ಹೆಚ್ಚಾಗಿ ಓದಬೇಕಾದಾಗಲೆಲ್ಲಾ ನಿದ್ರೆಯಿಲ್ಲ; ಸರಿಯಾಗಿ ತಿಂಡಿತೀರ್ಥಗಳ ಮೇಲೆ ಇಷ್ಟವಿಲ್ಲ; ಆಟಪಾಟಗಳಿಗವಕಾಶವಿಲ್ಲ; ಇಷ್ಟೆಲ್ಲಾ ಆಗುವಾಗ ಸುಖವೆಲ್ಲಿಂದ ಬಂತು? ಹೋಗಲಿ! ಒಂದು ಪರೀಕ್ಷೆ ಎಂದರೆ ಏನೋ! ಎಂತೋ! ಒಂದಾದ ಮೇಲೆ ಮತ್ತೊಂದು! ಪರೀಕ್ಷೆಗಳಿಗೂ ಪರಿಮಿತಿಯಿಲ್ಲ; ಓದುವುದಕ್ಕೂ ಪರಿಮಿತಿಯಿಲ್ಲ. ಮುಂದೆ ಸುಖ-ಸುಖವೆಂದು ಹೇಳುವರೂ

ತಪ್ಪುವುದಿಲ್ಲ. ಓದದಿದ್ದರೆ ಏಟು, ಕಷ್ಟ, ನಷ್ಟ, ಬೈಗಳು ಇವುಗಳಂತೂ ಹೇಳಬೇಕಾಗಿಲ್ಲ. ಇಷ್ಟಾಗಿಯೂ ಸುಖಮಾತ್ರ ಲವಲೇಶವಿಲ್ಲ. ಇಷ್ಟೂ ಆಗಲಿ. ಅಕಸ್ಮಾತ್ತಾಗಿ ಫೇಲಾಯಿತೆಂದರೆ– ಬೇಡಬೇಡ! ಯಾರಿಗೂ ಆ ಕಷ್ಟಬೇಡ!! ದ್ವೇಷಿಗಾಗಲೀ, ಜ್ಞಾತಿಗಾಗಲೀ, ಪ್ರತ್ಯಕ್ಷ ತಲೆಯನ್ನು ಕಡಿಯುವದಕ್ಕೆ ಬಂದವನಿಗೇ ಆಗಲಿ, ಒಟ್ಟಿಗೆ ಪರಮಾತ್ಮನ ಸೃಷ್ಟಿಯ ಲ್ಲಿನ ಯಾವ ಪ್ರಾಣಿಗೇ ಆಗಲಿ ಬೇಡ!!! ಇಷ್ಟೆಲ್ಲಾ ಆದ ಮೇಲೆ ಸುಖ ವೆಲ್ಲಿಂದ ಬಂತು? ಸುಖವಿಲ್ಲದಮೇಲೆ ಕಷ್ಟಪಡುವುದಕ್ಕೋಸ್ಕರಲೇ ಏಕೆ ಈ ಪ್ರಪಂಚದಲ್ಲಿ ಜೀವಿಸಿರಬೇಕು? ತಂದೆಗೆ ಬೇಡ, ತಾಯಿಗೆ ಬೇಡ, ಉಪಾಧ್ಯಾಯರಿಗೆ ಬೇಡ, ಜನರಿಗಂತೂ ಬೇಡವೇಬೇಡ, ಹೆಂಡತಿಮಕ್ಕ ಳಂತೂ ಇಲ್ಲವೇಯಿಲ್ಲ, ಇಷ್ಟು ಆದಮೇಲೆ ದೈವಕ್ಕೂ ಬೇಡ. ಇನ್ನು ಏಕಿರಬೇಕು? ಕೆರೆಗೆ ಹಾರುವುದೇ ಸರಿ.

ಇಷ್ಟು ನಿಷ್ಕರ್ಷಿಸಿ ಹಾರಬೇಕು. ಎನ್ನುವಷ್ಟರಲ್ಲಿ ಒಂದು ಶ್ಲೋಕವು ಜ್ಞಾಪಕಕ್ಕೆ ಬಂದಿತು. ಶ್ಲೋ॥ "ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ। ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥ ೧ ॥ ಅಂದರೆ ಮನುಷ್ಯನು ನೂರು ವರ್ಷ ಬದುಕಿದ್ದರೆ ಎಂದಾದರೊಂದುದಿವಸ ಸುಖವನ್ನ ಹೊಂದುತ್ತಾನೆಂಬುದು. ಆಗ ಈ ಶ್ಲೋಕವನ್ನು ಯಾರು ಹೇಳಿದ್ದರೆಂದು ಜ್ಞಾಪಿಸಿಕೊಂಡೆ. ಹಿಂದೆ ಒಂದು ದಿವಸ ನಮ್ಮ ತಂದೆಯ ವರು ದುಃಖಪಡುತ್ತಿದ್ದವರೊಬ್ಬರಿಗೆ, ರಾಮಾಯಣದಲ್ಲಿ ಭರತನೂ ಸಹ ಹೀಗೆ ಹೇಳಿರುವನು. ಎಂದು ಹೇಳಿ ಸಮಾಧಾನ ಹೇಳಿದರೆಂಬುದು ನೆನಪಾಯಿತು. ಆಗ ನನ್ನ ಮನಸ್ಸಿಗೆ ಪುನಃ ಹೊಳೆಯಿತು; ಏನು? ಈ ಲೋಕದಲ್ಲಿ ನಾನೊಬ್ಬನೇಯೋ ಕಷ್ಟಕ್ಕೊಳಗಾಗಿರುವವನು?

ನನ್ನದೇ ಹೆಚ್ಚೋ, ಇತರರದೇ ಹೆಚ್ಚೋ? ಅವರೆಲ್ಲರೂ ನನ್ನಂತೆಯೇ ಆತ್ಮಹತ್ಯಕ್ಕೆ ಪ್ರಯತ್ನಿಸಿದರೇ? ಇಲ್ಲ. ಏಕೆ? ಕಾರಣವೇನು? ಹೀಗೆಯೇ ಯೋಚಿಸಿ ಹಿಂದೆ ಯಾರ್ಯಾರು ಯಾವ್ಯಾವ ಕಷ್ಟಗಳನ್ನನುಭವಿಸಿದರೆಂಬು ದನ್ನು ಜ್ಞಾಪಿಸಿಕೊಂಡೆ. ರಾಮಾಯಣ, ಭಾರತ, ಭಾಗವತಗಳೆಲ್ಲವೂ ಜ್ಞಾಪಕಕ್ಕೆ ಬಂದುವು. ಶ್ರೀ ರಾಮಚಂದ್ರ ಚಕ್ರವರ್ತಿಯ ಮಗ; ಸುಕು ಮಾರ ಹೆಂಡತಿಯೊಡನೆ ಊರು ಬಿಟ್ಟು ಕಾಡಿಗೆ ಹೊರಟು ಹೋದ; ಪತ್ನಿ

ಯನ್ನು ಕಳೆದುಕೊಂಡ; ಸ್ನೇಹಿತನನ್ನು ಕಳೆದುಕೊಂಡ; ಆತ್ಮಹತ್ಯ ಮಾಡಿಕೊಳ್ಳಲಿಲ್ಲ; ಪುನಃ ಪತ್ನಿಯನ್ನು ಹೊಂದಿದ. ಹರಿಶ್ಚಂದ್ರಚಕ್ರವರ್ತಿಯು ರಾಜ್ಯವನ್ನೆಲ್ಲಾ ಕಳೆದುಕೊಂಡ; ಹೆಂಡತಿಮಕ್ಕಳನ್ನು ಮಾರಿದ; ಕಾಡಿನಲ್ಲಿ ಅಲೆದ; ಚಂಡಾಲನಿಗೆ ಆಳಾದ; ಸ್ಮಶಾನದಲ್ಲಿ ಕಾವಲಗಾರನಾದ; ಸತ್ತ ಮಗನನ್ನು ಪ್ರತ್ಯಕ್ಷವಾಗಿ ನೋಡಿದ; ಆಮೇಲೆ ಪ್ರತ್ಯಕ್ಷ ತನ್ನ ಹೆಂಡತಿಯನ್ನು ತನ್ನ ಕೈಯಾರೇ ಕಡಿಯಬೇಕಾಯಿತು. ಆದರೂ ಆತ್ಮಹತ್ಯವನ್ನು ಮಾಡಿಕೊಳ್ಳಲಿಲ್ಲ. ಪುನಃ ಮಕ್ಕಳನ್ನೂ, ಹೆಂಡತಿಯನ್ನೂ, ರಾಜ್ಯವನ್ನೂ ಪಡೆದ. ಆ ಮೇಲೆ ನಳಮಹಾರಾಜಚಕ್ರವರ್ತಿಯು ರಾಜ್ಯವನ್ನು ಕಳೆದುಕೊಂಡ; ಹೆಂಡತಿಯನ್ನು ಬಿಟ್ಟ; ಹಾವು ಕಡಿಯಿತು; ವಿಕಾರವುಳ್ಳವನಾದ; ರಾಜನ ಮನೆಯಲ್ಲಿ ಕುದುರೇ ಆಳಾದ; ಆದರೂ ಆತ್ಮಹತ್ಯನನ್ನು ಮಾಡಿಕೊಳ್ಳಲಿಲ್ಲ. ಪುನಃ ಹಿಂದಿನಂತೇ ಸುಖವನ್ನು ಹೊಂದಿದ. ಧರ್ಮರಾಯ– ರಾಜ್ಯಹೋಯಿತು; ವನವಾಸವಾಯಿತು; (ಬ್ರಾಹ್ಮಣನ ಅರಣಿಯು ಹೋದಾಗ) ತಮ್ಮಂದಿರೆಲ್ಲಾ ಸತ್ತುಬಿದ್ದಿರುವುದನ್ನು ನೋಡಿದ; ಆದರೂ ಆತ್ಮಹತ್ಯವನ್ನುಮಾಡಿಕೊಳ್ಳಲಿಲ್ಲ. ಪುನಃ ತಮ್ಮಂದಿರನ್ನೂ ರಾಜ್ಯಕೋಶಗಳನ್ನೂ ಹೊಂದಿದ. ಹೀಗೆಯೇ ಇನ್ನು ಸ್ತ್ರೀಯರಲ್ಲಿಯೊ? ಅಂದರೆ ಚಕ್ರವರ್ತಿಯರ ಮಗಳಂದಿರಾದ ಸಾವಿತ್ರಿ, ದಮಯಂತಿ; ಚಂದ್ರಮತಿ.– ಇವರುಗಳು ಕಷ್ಟಪಟ್ಟದ್ದಕ್ಕೆ ತುದಿಮೊದಲಿಲ್ಲ! ಆದರೂ ಯಾರೂ ಆತ್ಮಹತ್ಯಮಾಡಿಕೊಳ್ಳಲಿಲ್ಲ. ಏಕೆ? ಅವರು ಅನುಭವಿಸಿದ ಕಷ್ಟಗಳು ನನ್ನ ಕಷ್ಟಗಳಿಗಿಂತ ಕಡಮೆಯಾದುವುಗಳೇ? ಇಲ್ಲ. ಇಲ್ಲ. ಅವರಿಗೆ ಬಂದ ಕಷ್ಟಗಳೊ? ಸಾಮಾನ್ಯರು ಸಹಿಸಲಸಾಧ್ಯವಾದುವು. ಅವರುಗಳೊ? ಕೇವಲ ಸುಕುಮಾರರು. ಇಂತಹರೇ ಆತ್ಮಹತ್ಯವನ್ನು ಮಾಡಿಕೊಳ್ಳದೆ ಕೊನೆಗೆ ತಮ್ಮ ಪೂರ್ವಸ್ಥಿತಿಯನ್ನು ಪುನಃ ಹೊಂದಿ ಸುಖವಾಗಿದ್ದರು. ಅಂತಹರ ಪಾಡೇ ಹಾಗಿರುವಾಗ ಇನ್ನು ನನ್ನದೇನು? ನಾನಾದರೂ ಏಕೆ ಸಾಯಬೇಕು? ಇಲ್ಲ, ಇಲ್ಲ; ಸಾಯುವುದಿಲ್ಲ. ಆದದ್ದಾಗಲಿ. ಮುಂದಕ್ಕೆ ಪರೀಕ್ಷೆಯನ್ನು ಸಾಧಿಸಿ ಮುಂದಲ ಸುಖವನ್ನು ನಿರೀಕ್ಷೆಮಾಡುತ್ತೇನೆ. ಹೀಗೆಂದು ಯೋಚನೆ ಮಾಡಿದೆ. ಆದರೆ ಪುನಃ ಯೋಚಿಸಿದೆ. ಹಿಂದಿನವರ ಮಾತು ಇರಲಿ. ಈಗ ನನ್ನ ಜತೆಯಲ್ಲಿ ಫೇಲಾದವರೊ? ಅವರೆಲ್ಲರೂ ನನ್ನಂತೆಯೇ ಪ್ರಾಣಬಿಡುವರೆ? ಇಲ್ಲ

ವಷ್ಟೆ! ಅವರಿ ಅವರಿಗೇನು ಮಾನಾಪಮಾನಗಳಾಗಲಿ, ಮನೆಯಲ್ಲಿ ತಾಯಿತಂದೆಗಳ ನಿಂದೆಯಾಗಲಿ ಇಲ್ಲವೆ? ಕೆಲವರಿಗಿಲ್ಲದಿರಬಹುದು. ಆದರೆ ನನ್ನಂತಹರೊ? ಅವರಾವರೂ ಏಕೆ ಪ್ರಾಣ ಬಿಡಲಿಲ್ಲ? ಇಲ್ಲ ಇಲ್ಲ. ಯಾರೂ ಇವಕ್ಕೋಸ್ಕರ ಪ್ರಾಣ ಬಿಡುವುದಿಲ್ಲ. ಸರಿ; ನಾನೂ ಆತ್ಮಹತ್ಯ ಮಾಡಿಕೊಳ್ಳುವದಿಲ್ಲ. ಇಷ್ಟನ್ನೆಲ್ಲಾ ಯೋಚಿಸಿಕೊಂಡ ನಂತರ ಹಾಗೆ ನಿಷ್ಕರ್ಷೆ ಮಾಡಿದೆ. ಆವದ್ದಾಗಲಿ; ಈ ವರುಷವೂ ಇನ್ನು ಮುಂದೆಯೂ ಈಗ್ಗಿಂತಲೂ ಹೆಚ್ಚಿನ ಕಷ್ಟಪಟ್ಟು ಮುಂದಿನ ಪರೀಕ್ಷೆಗಳೆಲ್ಲವನ್ನೂ ಮಾಡುತ್ತೇನೆ. ಸಾಯುವದಾದರೆ ಹಾಗೆಯೇ ರೋಗ ಬಂದು ಸಾಯಬೇಕು. ನಾನಾಗಿಯೇ ಆತ್ಮಹತ್ಯವನ್ನು ಬೇರೆ ಮಾಡಿಕೊಳ್ಳುವುದಿಲ್ಲ. ಇನ್ನು ಮುಂದೆ ಯಾರಲ್ಲಿಯೂ ಹೆಚ್ಚಿಗೆ ಮಾತು ಕಥೆಗಳನ್ನಾಡುವುದಿಲ್ಲ. ತಿಂಡಿ, ತೀರ್ಥ, ನಿದ್ರೆ- ಎಲ್ಲವೂ ಅಷ್ಟಕ್ಕಷ್ಟೇ. ಇಷ್ಟೆಲ್ಲಾ ಯೋಚನೆ ಮಾಡಿ ಮನೆಯಲ್ಲಿ ಬಂದು ಯಥಾಸ್ಥಿತಿ ಮಲಗಿ ಬಿಟ್ಟೆ.



## ಅಧ್ಯಾಯ ೪.

ಹೀಗೆಯೇ ನಾಲ್ಕೈದು ದಿನಗಳು ಕಳೆದುವು. ಆ ಮೇಲೆ ಕಾಲೇಜು ಆರಂಭವಾಯಿತು. ನಾನೇ ಹೋಗಿ ಸ್ಕೂಲಿಗೆ ಸೇರಿಕೊಂಡೆ. ಈ ಮಧ್ಯೆ ನನ್ನ ತಾಯಿತಂದೆಗಳು ನನ್ನನ್ನು ಬೈಯ್ಯುವದನ್ನು ಬಿಟ್ಟುಬಿಟ್ಟಿದ್ದರು. ನನ್ನ ವಿಷಯದಲ್ಲಿ ಯಾವದೊಂದು ಮಾತನ್ನೂ ಆಡುತ್ತಿರಲಿಲ್ಲ. ನನಗೆ ಆಶ್ಚರ್ಯವಾಯಿತು. ಇದೇನಿರಬಹುದೆಂದು ಯೋಚಿಸುತ್ತಿದ್ದೆ. ಅಷ್ಟರಲ್ಲಿ ನನ್ನ ತಂಗಿಯರಲ್ಲಿಗೆ ಬಂದರು. ಅವರನ್ನು— ಅದೇನು, ನನ್ನ ವಿಷಯದಲ್ಲಿ ತಾಯಿತಂದೆಗಳು ಇತ್ತಲಾಗಿ ಏನೂ ಹೇಳುತ್ತಿಲ್ಲವೆಂದು ಕೇಳಿದೆ? ಅದಕ್ಕವರು– "ಯಾವುದೋ ಒಂದು ಕಾಗದವು ಅವರಕೈಗೆ ಸಿಕ್ಕಿತೆಂದೂ ಅದನ್ನು ಓದಿಕೊಂಡಲಾಗಾಯ್ತು ನಿನ್ನನ್ನು ಅಂದು ಆಡುವುದನ್ನು ನಿಲ್ಲಿಸಿದರೆಂದೂ" ಹೇಳಿದಳು. ಆಗ ನನಗೆ ಯೋಚನೆಯಾಯ್ತು; ಅದು ಯಾವ ಕಾಗದ? ಯಾರು ಬರೆದಿದ್ದವರು? ಅದರಲ್ಲಿ ಏನು ವಿಷಯವಿದ್ದಿತು? ಇತ್ಯಾದಿಯಾಗಿ ಯೋಚನೆಗೆ ಬಂತು. ಆಗ ನನಗೆ ಥಟ್ಟನೆ

ಏನೋ ಹೊಳೆಯಿತು. ನನ್ನ ಜೇಬಿನಲ್ಲಿ ಆ ರಾತ್ರೆ ಆತ್ಮಹತ್ಯಮಾಡಿಕೊಳ್ಳ ಬೇಕೆಂದು ಹೊರಟಾಗ ಪೋಲೀಸಿಗೆ ಎಂದು ಹೇಳಿ ಬರದಿಟ್ಟದ್ದೇನಷ್ಟೆ? ಅದನ್ನು ನೋಡಿದೆ. ಅದು ನನ್ನ ಜೇಬಿನಲ್ಲಿರಲಿಲ್ಲ. ಆಗ ನಾನು ಆ ಕಾಗದವೇ ಎಲ್ಲಿಯೋ ಅವರ ಕೈಗೆ ಸಿಕ್ಕಿರುವದೆಂತಲೂ, ಅದನ್ನು ನೋಡಿದ ಮೇಲೆ ಅದರಲ್ಲಿ ಬರೆದಿದ್ದಂತೆ ಇನ್ನು ಮುಂದೆಯೂ ತಾವು ಅನ್ನುತ್ತಿದ್ದರೆ ಒಂದುವೇಳೆ ನಾನು ಆತ್ಮಹತ್ಯಮಾಡಿಕೊಂಡು ಸಾಯುಬಹುದೆಂಬ ಭಯದಿಂದ ನನ್ನನ್ನು ಬಯ್ಯುವುದನ್ನು ಬಿಟ್ಟರೆಂತಲೂ ಊಹಿಸಿದೆ. ಇರಲಿ, ಮುಂದಲ ವಿಷಯುಗಳನ್ನು ಹೇಳುತ್ತೇನೆ ಕೇಳಿರಿ. ನಾನು ಆ ಮೇಲೆ ಒಂದೆರಡು ಪ್ರೈವೇಟುಪಾಠಗಳನ್ನು ಇಟ್ಟುಕೊಂಡು, ಎಂಟು ಹತ್ತು (8—10) ರೂಪಾಯಿಗಳನ್ನು ಮಾಡಿಕೊಂಡು, ಫೀಸು ಕೊಟ್ಟು ಕೊಂಡು, ಅಂತೂ ಇಂತೂ ವರ್ಷಾಂತ್ಯದಲ್ಲಿ ಇಂಟರ್ ಮಿಡಿಯಟ್ ಪರೀಕ್ಷೆ ಯಲ್ಲಿ ಪಾಸಾದೆ. ಆ ಮೇಲೆ ಹೀಗೆಯೇ (ಬಿ. ಎ. B. A.) ಪಾಸೂ ಆಯಿತು. ಇಷ್ಟುಹೊತ್ತಿಗೆ ಬಹಳ ಜನರು ವರದಕ್ಷಿಣೆಸಮೇತವಾಗಿ ಹೆಣ್ಣು ಕೊಡುತ್ತೇವೆಂದು ಬಂದರು. ನನಗೆಮಾತ್ರ ಮದುವೆಯು ಬೇಕಾಗಿರಲಿಲ್ಲ. ಕಾರಣವೇನೆಂದರೆ (1) ನಾನು ಇನ್ನೂಮುಂದಕ್ಕೆ ಓದಬೇಕಾಗಿದ್ದುದರಿಂದ ಈ ಮದುವೆಯಿಂದ ತೊಂದರೆಯಾಗಬಹುದೆಂದೂ, ನಾನು ಓದಬೇಕಾದ್ದೆಲ್ಲವೂ ಮುಗಿದನಂತರ ಮದುವೆಮಾಡಿಕೊಳ್ಳಬೇಕೆಂದಿತ್ತು. (೨) ಒಂದುವೇಳೆ ಮದುವೆಮಾಡಿಕೊಂಡ ಮೇಲೆ ಓದುವಾಗ ಅಕಸ್ಮಾತ್ತಾಗಿ ಫೇಲುಗೀಲಾಗಿ ಬಿಟ್ಟರೆ ಒಂದುಕಡೆ ತಂದೆತಾಯಿಗಳು, ಮತ್ತೊಂದು ಕಡೆ ಅತ್ತೆಮಾವಂದಿರು, ಇವೆರಡುಕಡೆಗಳಲ್ಲೂ ಅಪಮಾನಹೊಂದಿ ಹಿಂದಿನಂತೆ ಆತ್ಮಹತ್ಯವನ್ನೇನಾದರೂ ಮಾಡಿಕೊಂಡರೆ ನಾನಾಗಿ ಒಬ್ಬ ಹುಡುಗಿಯ ಅಭಿವೃದ್ಧಿಯನ್ನು ಹಾಳುಮಾಡಿದಂತಾಗುವದೆಂಬುವದು (3) ಒಂದುವೇಳೆ ಮದುವೆಮಾಡಿಕೊಂಡರೂ ಬಡವರ ಮನೆ ಹೆಣ್ಣನ್ನೇ ಮದುವೆಮಾಡಿಕೊಳ್ಳಬೇಕೆಂಬುದು. (4) ಇವೆಲ್ಲಕ್ಕಿಂತಲೂ ದೊಡ್ಡದಾದ ಮತ್ತೊಂದು ಕಾರಣವೇನೆಂದರೆ, ಲೋಕದಲ್ಲಿ ಜನರು ಮದುವೆಯಾಗಿ ಪಡುವ ಕಷ್ಟ ಸುಖಗಳನ್ನು ನೋಡುತ್ತಿದ್ದೆನಾದುದರಿಂದ ಆ ದುಃಖಕ್ಕೆ ಮೂಲಭೂತವಾದ ಮದುವೆಯೇ ಬೇಡವೆಂದು ತೋರಿತು. ಆದರೆ ನನ್ನ ತಂದೆತಾಯಿಗಳು ಇವುಗಳೆಲ್ಲಕ್ಕೂ ಒಂದೊಂದಕ್ಕೆ




ಹೇಳಿ ಐಶ್ವರ್ಯವಂತರ ಮನೆಯ ಮಗಳನ್ನೇ ಮದುವೆಮಾಡಿಕೊಳ್ಳಬೇಕೆಂದು ಕಡ್ಡಾಯಮಾಡಿದರು. ಅದರಂತೆಯೇ ಮದುವೆಯೂ ಆಗಿಹೋಯಿತು. ಸ್ವೇಚ್ಛೆಯಾಗಿ ತಿರುಗುವ ಹೋರಿಗೆ ಮೂಗುದಾರ ಹಾಕಿದಂತಾಯಿತು. ಇರಲಿ. ನಮ್ಮ ಮಾವನವರು ಬೆಂಗಳೂರಲ್ಲಿ ಒಬ್ಬ ದೊಡ್ಡ ಇಂಜನಿಯರಾಗಿದ್ದರು. ಆ ವೇಳೆ ನಮ್ಮ ತಂದೆತಾಯಿಗಳು ನನ್ನನ್ನು ಅವರ ಮನೆಯಲ್ಲಿದ್ದುಕೊಂಡೇ ಮುಂದಕ್ಕೆ ಓದುವಂತೆ ಹೇಳಿದರು. ಅವರ ಉದ್ದೇಶ್ಯವು ಊಟ ತಿಂಡಿ ಫೀಜು ಇತ್ಯಾದಿಗಳಿಗನುಕೂಲವಾಗುತ್ತೆಂಬುವದೇ. ಆದರೆ ನಾನು ಮಾತ್ರ ಒಪ್ಪಲಿಲ್ಲ. ಏಕೆಂದರೆ, ಮಾವನ ಮನೆಗೆ ಒಂದೆರಡುಸಾರಿ ಹೋಗಿಬಂದದ್ದರಿಂದಲೇ ನನಗಾಗಿದ್ದ ಸ್ಥಿತಿಯು ನನಗಾಗಲೇ ಅನುಭವಕ್ಕೆ ಬಂದಿತ್ತು. ಇನ್ನು ಸದಾ ಅಲ್ಲೇ ಇದ್ದುಕೊಂಡು ವ್ಯಾಸಂಗ ಮಾಡುವುದೆಂದರೆ, ನಾನು ಉತ್ತೀರ್ಣನಾಗುವ ಸಂಭವವೇ ಇರಲಿಲ್ಲ. ಈ ವಿಷಯವು ಮಾವನ ಮನೆಯಲ್ಲೇ ಇದ್ದುಕೊಂಡು ವ್ಯಾಸಂಗಮಾಡಿರುವವರಿಗೆ ಅನುಭವವಿಷಯವಾದುದೇ. ಇರಲಿ. ಮುಂದೆ(ಬಿ. ಎಲ್. B. L.) ಓದಬೇಕಾಗಿತ್ತು. ಅದೆಲ್ಲಕ್ಕೂ ಪೂರ್ಣ ಸಹಾಯವು ನಮ್ಮ ಮಾವನವರದೇ. ಅದೂ ಆಯಿತು. ನಮ್ಮ ಮಾವನವರಿಗೆ ನಾನು ಇಂಜಿನಿಯರಿಂಗ್ ಪಾಸುಮಾಡಬೇಕಾಗಿತ್ತೆಂಬ ಯೋಚನೆ. ನನಗೋ ಅಷ್ಟು ಹೊತ್ತಿಗಾಗಲೇ ಓದಿಓದಿ ಸಾಕಾಗಿಹೋಗಿತ್ತು. ನಮ್ಮ ತಂದೆತಾಯಿಗಳಿಗೆ ಬೇಕಾದರೆ ಮುಂದಕ್ಕೆ ಓದಲಿ, ಬೇಡವಾದರೆ ಬಿಡಲಿ ಎಂದಿತ್ತು. ಆದರೆ ನಮ್ಮ ಮಾವನವರು ಇಂಜಿನಿಯರಾದ್ದರಿಂದ ನಾನೂ ಒಬ್ಬ ಇಂಜಿನಿಯರಾಗಬೇಕೆಂತಲೇ ಅವರಿಗಾಶೆಯಿದ್ದಿತ್ತು. ಇದಕ್ಕೋಸ್ಕರವೇ ಅವರು ನನ್ನನ್ನು ಬಲಾತ್ಕಾರಮಾಡಿ ಇಂಜನಿಯರಿಂಗ್ ಪರೀಕ್ಷೆಗೆ ಓದಿಕೊಂಡು ಬರಲು ಪೂನಾಕ್ಕೆಕಳುಹಿಸಿಕೊಟ್ಟರು. ಅಲ್ಲಿಯೂ ಕೆಲವು ವರ್ಷಗಳು ಓದಿ ಇಂಜಿನಿಯರಿಂಗ್ ಪಾಸುಮಾಡಿದ್ದಾಯಿತು. ಎಲ್ಲವೂ ಆದನಂತರ ಇನ್ನು ಮುಂದೇನೂ ಓದಬೇಕೆಂತಿಲ್ಲವೆಂಬ ಸಂತೋಷದಿಂದ ರಜಾಕಾಲದಲ್ಲಿ ತಪ್ಪದೆ ಪ್ರತಿನಿತ್ಯವೂ (12) ಘಂಟೆಗಳಕಾಲ ನಿದ್ರೆಮಾಡಲು ಮೊದಲುಮಾಡಿದೆ. ಹಾಗೂ ಹೀಗೂ ಎಲ್ಲಾ ರಿಜಲ್ಟುಗಳೂ ಬಂದುವು. ಎಲ್ಲದರಲ್ಲಿಯೂ ತೇರ್ಗಡೆಯಾಗಿತ್ತು. ನಮ್ಮ ತಾಯಿತಂದೆಗಳೂ ಅತ್ತೆ

ಮಾವಂದಿರೂ, ನನ್ನ ಹೆಂಡತಿಯೂ ಇವರೆಲ್ಲರಿಗೂ ಮಹತ್ತಾದ ಸಂತೋಷವೇ. ನನಗೆಮಾತ್ರ ಅಷ್ಟೇನೂ ಸಂತೋಷವಾದಹಾಗೆ ಕಾಣಲಿಲ್ಲ. ದುಃಖವಾದಹಾಗೂ ಕಾಣಲಿಲ್ಲ. ಏಕೆಂದರೆ, ನಾನು ಅನುಭವಿಸಿದ ಕಷ್ಟಗಳೆಲ್ಲವೂ ಆ ವೇಳೆಯಲ್ಲಿ ನನ್ನ ಕಣ್ಣಿಗೆ ಕಟ್ಟಿದುವು.

ಇದೆಲ್ಲವೂ ಆದನಂತರ, ನನಗೆ ಇನ್ನೂ ಒಂದು ವರ್ಷಕಾಲ ಯಾವ ಕೆಲಸಕಾರ್ಯಗಳನ್ನೂ ಹಚ್ಚಿಕೊಳ್ಳದೆ ಸುಮ್ಮನಿರಬೇಕೆಂದಿದ್ದಿತು. ಆದರೇನು? ನನ್ನ ಗ್ರಹಚಾರಕರ್ಮ ಅಂಥಾದ್ದಲ್ಲವೇ ಅಲ್ಲ. ರಿಜಲ್ಟುಗಳು ತಿಳಿದವೊಡನೆಯೇ ಎಲ್ಲರೂ "ಇಷ್ಟುದಿನವೂ ನಾವು ನಿನ್ನ ಪರಿಚಾರಿಕೆಯನ್ನು ಮಾಡಿದ್ದಾಯಿತು. ಇನ್ನು ನೀನು ನಮ್ಮ ಪರಿಚಾರಕೆಯನ್ನು ಮಾಡುವುದಕ್ಕೆ ಹೊರಡೆಂದರು." ಅಷ್ಟರಲ್ಲಿ ಇಂಜಿನಿಯರಿಂಗ್ ಇಲಾಖೆಯಲ್ಲಿ (150) ರೂಪಾಯಿನ ಒಂದು ಕೆಲಸವೂ, ಕಾಲೇಜಿನಲ್ಲಿ ನ್ಯಾಯಶಾಸ್ತ್ರದ ವಿಷಯದಲ್ಲಿ (Law) ಪಾಠಹೇಳತಕ್ಕ (250)ರೂ. ನ ಒಂದು ಕೆಲಸವೂ ಖಾಲಿಬಿತ್ತು. ನಮ್ಮ ಮಾವನವರಿಗೆ ಈಗ ಇಂಜಿನಿಯರಿಂಗ್ ಇಲಾಖೆಯಲ್ಲಿ (150) ರೂಪಾಯಿನ ಕೆಲಸವಾದರೂ ಮುಂದೆ ಬೇಗ ಬೇಗನೆ ಮೇಲಕ್ಕೇರುತ್ತಾ (1500) ರೂಪಾಯಿನ ವರೆಗೂ ಏರಬಹುದಾದ್ದರಿಂದ ಅದಕ್ಕೇ ನಾನು ಸೇರಿಕೊಳ್ಳಬೇಕೆಂಬ ಯೋಚನೆ. ಆದರೆ, ನಮ್ಮ ತಂದೆತಾಯಿಗಳಿಗೆ ಈಗ (250) ರೂಪಾಯಿ ಬರುತ್ತದಲ್ಲಾ! ಈ ಕೆಲಸಕ್ಕೆ ಸೇರಬೇಕೆಂದೂ, ಮುಂದೆ ಸಂದರ್ಭಬಿದ್ದರೆ ಬೇರೆ ಕೆಲಸಕ್ಕೆ ಹೋಗಬಹುದೆಂದೂ ಅವರ ಯೋಚನೆ. ನನ್ನ ಯೋಚನೆಯೂ ಇದೇ ಆಗಿತ್ತು. ಏಕೆಂದರೆ, ಇಷ್ಟು ದಿವಸ ಕಷ್ಟಪಟ್ಟದ್ದಂತೂ ಆಯಿತು. ಇನ್ನು ಇಂಜಿನಿಯರಿಂಗ್ ಕೆಲಸಕ್ಕೆ ಹೋಗಿ ಊರೂರಲೆಯುತ್ತಾ ಕಾಲಕಾಲಕ್ಕೆ ತಿಂಡಿತೀರ್ಥಗಳು ನಿದ್ರೆ ಇವೊಂದೂ ಇಲ್ಲದೆ ಮೂರು ಹೊತ್ತೂ ಆ ಕಟ್ಟೆಯ ಗತಿ ಏನಾಯಿತೋ, ಈ ಅಣೆಕಟ್ಟಿನ ಗತಿ ಏನೋ? ಎಂದು ಯೋಚಿಸುತ್ತಾ "ಸಾಕಪ್ಪ, ಈ ಹಾಳು ಕೆಲಸ" ಎನ್ನುತ್ತಿರುವುದಕ್ಕಿಂತಲೂ, ಸದ್ಯ ಕಾಲೇಜಿನಲ್ಲಿ ಏನೋ ಕ್ಲುಪ್ತಕಾಲದಲ್ಲಿ (ದಿನ 1ಕ್ಕೆ 2–3 ಘಂಟೆಗಳ ಕಾಲ) ಪಾಠಹೇಳಿ ಮತ್ತೊಂದು ರಗಳೆಯೂ ಇಲ್ಲದೆ ಸುಖವಾಗಿರಬೇಕೆಂಬುದೇ. ಇಷ್ಟು ಹೊತ್ತಿಗಾಗಲೆ ನನ್ನ ಹೆಂಡತಿಯು ದೊಡ್ಡವಳಾಗಿ ಮನೆಗೆ

ಬಂದಿದ್ದಳು. ಅನಂತರ ಕಾಲೇಜಿನ ಕೆಲಸಕ್ಕೆ ಅಪ್ಲಿಕೇಷನ್ ಹಾಕಿದೆ. ಅದು ಸ್ಯಾಂಕ್ಷನ್ ಆಗಿ ಕೆಲಸಕ್ಕೆ ಆರ್ಡರೂ ಸಹ ಬಂದಿತು. ಇದನ್ನು ನೋಡಿ ಮನೆಯುವರೆಲ್ಲರಿಗೂ ಸಂತೋಷವೆ. ನನಗೂ ಸಂತೋಷವಾಗ ಲಿಲ್ಲವೆಂದು ಹೇಳುವುದಕ್ಕಿಲ್ಲ. ಸರಿ; ಇರಲಿ. 1 ತಿಂಗಳಾಯಿತು. 250/-ರೂ. ಸಂಬಳವು ತುಂಬಿ ಬಂದಿತು. ಅದಷ್ಟನ್ನೂ ತೆಗೆದುಕೊಂಡು ಬಂದು ನನ್ನ ತಂದೆತಾಯಿಗಳಲ್ಲಿ ಒಪ್ಪಿಸಿಬಿಟ್ಟೆ. ಅವರ ಸಂತೋಷಕ್ಕೆ ಪಾರವೇ ಇಲ್ಲದೆ ಆನಂದಬಾಷ್ಪವನ್ನು ಸುರಿಸಿ ನನಗೆ ಆಶೀರ್ವಾದ ಮಾಡಿದರು. ಅವರ ಸಂತೋಷವನ್ನು ನೋಡಿ ನನಗೂ ಮನಸ್ಸಿಗೆ ತೃಪ್ತಿಯಾಯಿತು. ಹೀಗೆಯೆ ಕೆಲವು ತಿಂಗಳುಗಳು ಕಳೆದುವು. ಕಾಲೇಜಿನಲ್ಲಿ ಪಾಠ ಹೇಳುವಾಗ ಮಾತ್ರ ಕೊಂಚ ಹೊರತು ಮಿಕ್ಕ ಕಾಲಗಳಲ್ಲೆಲ್ಲ ನಾನು ಸಂತೋಷವುಳ್ಳವನಾಗಿದ್ದೆನೆಂತಲೇ ಹೇಳಬಹುದು. ಆದರೆ ಒಂದು ವಿಷಯವನ್ನು ಮಾತ್ರ ಮರೆಯಬೇಡಿರಿ. ಅದೇನೆನ್ನು ವಿರೋ? ನನಗೆ ಸಂತೋಷವಾಗಿಲ್ಲದಿರುವುದಕ್ಕೆ ಎಷ್ಟು ಸಲಕರಣೆಗಳು ಬೇಕೋ, ಅಷ್ಟು ಆಗಲೇ ಒದಗಿದ್ದುವು. ಆದರೆ ನನ್ನ ಮನಸ್ಸನ್ನು ಗಟ್ಟಿ ಯಾಗಿ ನನ್ನ ಕೈಯಲ್ಲೆ ಇಟ್ಟುಕೊಂಡಿದ್ದುದರಿಂದ ನಾನು ಅಷ್ಟು ಮಟ್ಟಿಗಾ ದರೂ ಸಮಾಧಾನದಿಂದಿರಲು ಅವಕಾಶವಾಯಿತು. ಆ ಸಲಕರಣೆ ಯಾ ವುದು ಗೊತ್ತೊ? ಮತ್ತಾವುದೂ ಅಲ್ಲ. **ನನ್ನ ಹೆಂಡತಿಯೆ.** ನನ್ನ ಹೆಂಡತಿಯು ಚಿಕ್ಕವಳಾಗಿದ್ದಳು. ಆದರೇನು? ಜಾತಿಗುಣವೂ ಸ್ಥಾನ ಗುಣವೂ ಎಲ್ಲಿ ಹೋಗುವುದು? ಜಾತಿಗುಣ ಸ್ತ್ರೀಜಾತಿ (ಮಾತ್ಸರ್ಯ, ಹಟಮಾರಿತನ, ಅಹಂಕಾರ, ಇವುಗಳು). ಸ್ಥಾನಗುಣ ದೊಡ್ಡ ಮನುಷ್ಯರ ಮಗಳು, ದೊಡ್ಡ ಮನುಷ್ಯನ ಹೆಂಡತಿ ಎನ್ನುವುದು. ಇವೆರಡು ಗುಣ ಗಳಿಂದ ನನ್ನ ಮನಸ್ಸನ್ನು ಕೆಡಿಸುವುದಕ್ಕೆ ಮೊದಲು ಮಾಡಿದಳು. ಅದೇನೆಂದರೆ, ನಾನು ಪ್ರತಿ ತಿಂಗಳಲ್ಲಿಯೂ 250/-ರೂಪಾಯಿಗಳನ್ನು ತಂದು ತಂದೆತಾಯಿಗಳಲ್ಲಿ ಕೊಡುತ್ತಿದ್ದೆನಷ್ಟೆ? ಇದು ಅವಳಿಗೆ ಸಹಿಸು ತ್ತಿರಲಿಲ್ಲ. ತಾನು ಕೈಹಿಡಿದ ಹೆಂಡತಿಯಾಗಿರುವುದರಿಂದಲೂ ತಾನು ದೊಡ್ಡವರ ಮನೆಯ ಹೆಣ್ಣಾಗಿರುವುದರಿಂದಲೂ ತನ್ನ ತಂದೆಯು ದುಡ್ಡು ಕೊಟ್ಟು ಇಷ್ಟೆಲ್ಲಾ ಓದಿಸಿದ್ದರಿಂದಲ್ಲವೆ ಇಷ್ಟು ದೊಡ್ಡ ಕೆಲಸವಾದದ್ದು? ನಮ್ಮ ತಂದೆಯು ಯಾರಿಗೋಸ್ಕರ ಇಷ್ಟೆಲ್ಲಾ ಮಾಡಿದನು? ನನಗೋಸ್ಕರ

ತಾನೇ? ಆದುದರಿಂದ ತನ್ನ ಕೈಲೇನೆ ಸಂಬಳವನ್ನೆಲ್ಲಾ ತಂದುಕೊಡ ಬೇಕೆಂದು ಪೀಡಿಸುತ್ತಿದ್ದಳು. ಆದರೆ ನೀವು ಒಂದು ಮಾತನ್ನು ಕೇಳಬಹುದು. ಅವಳು ಈ ರೀತಿ ಹೇಳುವುದಕ್ಕೆ ಅತ್ತೆಮಾವಂದಿರಿಂದಾಗಲಿ ನನ್ನಿಂದಾಗಲಿ ಕುಂದುಕೊರತೆಗಳಿದ್ದಿತೇನೋ ಎಂದು. ಹಾಗೆಂದೂ ಯೋಚನೆ ಮಾಡ ಬೇಡಿರಿ. ನಮ್ಮ ತಂದೆತಾಯಿಗಳು ಸೊಸೆಯೆಂದರೆ ಪ್ರತ್ಯಕ್ಷ ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಿಂತಲೂ ಕೊನೆಗೆ ನನಗಿಂತಲೂ ಹೆಚ್ಚೆಂತಲೇ ತಿಳಿದುಕೊಂಡಿದ್ದರು. ಅಲ್ಲದೆ ಅವಳು ಚಿಕ್ಕವಳಾಗಿದ್ದುದರಿಂದ ಕಷ್ಟವಾದ ಕೆಲಸಗಳೊಂದನ್ನೂ ಹೇಳದೆ ತಾವೇ ಎಲ್ಲವನ್ನು ಮಾಡುತ್ತಿದ್ದರು. ಇವಳಿಗೆ ತಿಂಡಿತೀರ್ಥ ಊಟ ಉಡಿಗೆ ಇವುಗಳಿಗೆ ಯಾವುದಕ್ಕೂ ಕಡಮೆಯಿರಲಿಲ್ಲ. ಆದರೇನು? ಮೇಲೆ ಹೇಳಿದಂತೆ ಆ ಎರಡು ಗುಣಗಳಿಂದ ನನ್ನನ್ನು ಅನ್ನುವುದಕ್ಕೆ ಆರಂಭಿಸಿದಳು. ನಾನು ಕೇಳಲಿಲ್ಲ. ಆ ಮೇಲೆ ಏನೇನೋ ಥಳುಕುಮುಳುಕು ಮಾಡುವುದಕ್ಕೆ ಬಂದಳು. ನಾನು ಅದೊಂದಕ್ಕೂ ಸೊಪ್ಪು ಹಾಕಲಿಲ್ಲ. ಅದಕ್ಕೆ ಕಾರಣವೇನೆಂದು ನೀವು ಕೇಳಬಹುದು. ಇವರ ತಂದೆಯೂ, ದುಡ್ಡೂ, ಇವಳೂ ಎಲ್ಲವರೂ ಈಚೆಗೆ ಬಂದವರು. ನಮ್ಮಪ್ಪನೂ ನಮ್ಮಮ್ಮನೂ ಮೊದಲಿನಿಂದಲೂ ಇದ್ದವರು. ನಮ್ಮಮ್ಮನು ನನ್ನನ್ನು ಒಂಭತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತು ಹುಟ್ಟಿದ ಮೇಲೆ ಎಳೇ ಮಗುವಾಗಿರುವಾಗ ತನಗೆ ಹೊಟ್ಟೆಗೆ ಇದ್ದರೂ ಇಲ್ಲದಿದ್ದರೂ ತನಗೆ ಎಂತಹ ಕಷ್ಟನಷ್ಟಗಳಾದರೂ ಲಕ್ಷ್ಯ ಮಾಡದೆ ನನಗೆ ಮಾತ್ರ ಸ್ತನ್ಯವನ್ನು ಕೊಟ್ಟು ಸಾಕಿ ಸಲಹಿ, ನನ್ನ ಜಲ ಮಲಗಳೆಲ್ಲವನ್ನೂ ಬಾಚಿಹಾಕಿ ಬೆಳಸಿದವಳು ತಾಯಿ. ಇನ್ನು ನನ್ನ ತಂದೆ ನನಗೆ ಪಾಲಕನಾಗಿ ಮನೆಗೆ (ತಾಯಿಗೂ ನನಗೂ) ಬೇಕಾದ ಪದಾರ್ಥಗಳೆಲ್ಲವನ್ನೂ ತಂದು ಹಾಕುತ್ತಾ, ನಾನು ದೊಡ್ಡವನಾದ ಮೇಲೆ, ಕಂಡಕಂಡವರೆಲ್ಲರಲ್ಲೂ ಬೇಡಿ ಫ್ರೀಷಿಪ್ ಪುಸ್ತಕಗಳು ಇತ್ಯಾದಿಗಳಿಗೆ ಅಲೆದಲೆದು ನನ್ನನ್ನು B. A. ಪರೀಕ್ಷೆಯ ಪೂರ್ತ ಓದಿಸಲಿಲ್ಲವೇ? ಇಂತಹ ಶ್ರೇಷ್ಠರಾದ ನನಗೋಸ್ಕರ ಆದಿಯಿಂದಲೂ ಕಷ್ಟನಷ್ಟಗಳನ್ನನುಭವಿಸಿದ ತಂದೆತಾಯಿಗಳನ್ನು ಬಿಟ್ಟು ಇವಳಲ್ಲಿ ಸಂಬಳವನ್ನು ತಂದು ಕೊಡಲೆ? ಇವಳೇನಾದರೂ ಪತಿಯ ವಿಷಯದಲ್ಲಿ ನಿಜವಾದ ಪ್ರೀತಿಯುಳ್ಳವಳಾಗಿದ್ದಳೆಂತೂ ಸರಿ. ಇಲ್ಲದಿದ್ದರೆ ಪತಿಗೂ ಅತ್ತೆಮಾವಂದಿ

ರಿಗೂ ದ್ರೋಹಮಾಡುವುದಕ್ಕೂ ಹೇಸುವವಳಲ್ಲವೆಂತಲೇ ಹೇಳಬೇಕು. ಹಾಗೆ ನಾನು ಹೇಳಿದಂತಲ್ಲದೆ ಅವಳು ನಿಜವಾಗಿಯೂ ಪತಿವ್ರತಾಗುಣ ವುಳ್ಳವಳೇ ಹೌದೆಂದೂ ಹೇಳುವಿರೊ? ಹಾಗಿದ್ದರೆ ಪತಿವ್ರತಾಸ್ತ್ರೀಯು ಲಕ್ಷಣವೇನು? ಪತಿಯು ಮತ್ತು ಅತ್ತೆಮಾವಂದಿರ ಸೇವೆಮಾಡುತ್ತಾ, ಅವರು ಹೇಳಿದಂತೆ ಕೇಳಿಕೊಂಡು ಅವರಾಗಿಯೇ ಕೊಟ್ಟ ತಿಂಡಿತೀರ್ಥ ಗಳನ್ನು ತಿಂದು ಉಡಿಗೆತೊಡಿಗೆಗಳನ್ನು ತೊಟ್ಟುಕೊಂಡು ಯಾವ ಇತರ ತನಗೆ ಸಂಬಂಧಪಡದ ಮಾತನ್ನೂ ಆಡದೆ ಸೇವೆ ಮಾಡುವುದಲ್ಲವೆ? ಹಾಗಿಲ್ಲವೆಂಬುದು ಮೇಲೆಯೆ ಕಾಣುತ್ತಿದೆ. ಅದೂ ಇರಲಿ. ಮತ್ತೂ ಒಂದು ಮಾತು. ಇವರ ತಂದೆಯು ನನಗೇನು ಪುಗಸಟ್ಟೆ ಹೆಣ್ಣು ಕೊಡಲಿಲ್ಲ. ನಾನು B. A. ಪಾಸ್ ಮಾಡಿದ್ದೆ. ಆ ಮೇಲೆ ಅಲ್ಲವೆ ಹೆಣ್ಣು ಕೊಡುವುದಕ್ಕೆ ಬಂದದ್ದು? ಅವರು ದುಡ್ಡು ಕೊಟ್ಟದ್ದು ನಿಶ್ಚಯ. ಹಾಗೂ ನಾನು ಕಷ್ಟಪಟ್ಟು ಮುಂದಕ್ಕೆ ಓದಿದ್ದರಿಂದಲ್ಲವೆ ನನಗೆ ಈ ಕೆಲಸನಾಗಿರುವುದು? ನನಗೆ ಅವರು ದುಡ್ಡು ಕೊಟ್ಟು ಓದಿಸಿದ್ದಷ್ಟಕ್ಕೆ ಅವಶ್ಯಕವಾಗಿ ನಾನು ಅವರಿಗೆ ಕೃತಜ್ಞನಾಗಿಯೇ ಇದ್ದೇನೆ. ಮತ್ತು ಅವರ ಮಗಳನ್ನು ಚನ್ನಾಗಿ ಸಾಕುತ್ತಲೂ ಇದ್ದೇನೆ. ಇನ್ನೂ ಇದಕ್ಕೂ ಹೆಚ್ಚಿಗೆ ನಾನು ಮಾಡಬೇಕಾದುದೇನು? ಇವಳ ತಂದೆಯು ನನ್ನನ್ನು ಹುಟ್ಟದಾಗಿನಿಂದಲೇ ಸಾಕಿ ಸಲಹಿ ಓದಿಸಿ ಹೆಣ್ಣು ಕೊಟ್ಟು ಮದುವೆ ಮಾಡಿಸಿದ್ದಾದರೆ, ಏನೋ ಒಂದು ವೇಳೆ ಇವಳ ಮಾತಿನಂತೆಯೆ ನಡೆಯುಬಹುದಾಗಿತ್ತು. ಅದೊಂದೂ ಇಲ್ಲವಲ್ಲ. ಇರಲಿ; ಅಂತೂ ಈ ವಿಧವಾದವುಗಳೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಸುಖವಾಗಿದ್ದೆನೆಂತಲೇ ಹೇಳಬೇಕು.



## ಅಧ್ಯಾಯ ೫

ಆ ಮೇಲೆ ನನ್ನ ಕರ್ಮವು ಬಲಿಷ್ಠವಾಗುತ್ತ ಬಂದಿತು. ಅಷ್ಟು ಹೊತ್ತಿಗೆ 350–50–500/–ರೂಪಾಯಿನ **ಸಬ್ ಜಡ್ಜಿ** ಕೆಲಸಒಂದು ಖಾಲಿ ಇರುವುದೆಂದು ವರ್ತಮಾನ ಬಂದಿತು. ಇದನ್ನು ಕೇಳಿದೊಡನೆಯೆ, ಮನೆ ಯುವರೆಲ್ಲರೂ ನನ್ನನ್ನು ಆ ಕೆಲಸಕ್ಕೆ ಅಪ್ಲಿಕೇಶನ್ ಹಾಕುವಂತೆ ಹೇಳಿದರು.

ನನಗೆಮಾತ್ರ ಇಷ್ಟವಿರಲಿಲ್ಲ. ಕಾರಣವೇನೆಂದರೆ, ಈಗಲೇನೊ ಸಂಬಳವು ಕೊಂಚ ಕಮ್ಮಿಯಾದರೂ ಬೇಕಾದಷ್ಟು ಪುರ್ಸತ್ತುಂಟು, ಹೆಚ್ಚಿಗೆಕೆಲಸವಿಲ್ಲ. ಇತರ ವಿಧವಾದ ತೊಂದರೆಗಳೂ ಕಡಮೆ ಎನ್ನುವುದು. ನಮ್ಮಮನೆಯುವ ರಾದರೊ ಹೆಚ್ಚಾಗಿ ಸಂಬಳಬಂದರೆ ಬೇಕಾದಹಾಗೆ ಪರಿಚಾರಕರನ್ನೂ ಆಳುಕಾಳುಗಳನ್ನೂ ಇತರ ಸಲಕರಣೆಗಳನ್ನೂ ಒದಗಿಸಿಕೊಂಡು ಎಷ್ಟೋ ಸುಖವಾಗಿರಬಹುದೆಂದು ಹೇಳಿದರು. ಹಾಗೇ ಆಗಲಿ ಎಂದು ಅಪ್ಲಿಕೇ ಷನ್ ಹಾಕಿದೆ. ಆ ಕೆಲಸಕ್ಕೂ ಆರ್ಡರ್ ಬಂದೇ ಬಂದಿತು. ಜನರೆ ಲ್ಲರೂ ಕೈಹಿಡಿದವಳ ಪುಣ್ಯವೆಂದರು. ಆಗ ನಾನು "ಕೈಹಿಡಿದವಳ ಪುಣ್ಯ ವ್ರೋ, ಕೈಹಿಡಿದುಕೊಂಡವನ ಪುಣ್ಯವ್ರೋ" ಎಂದುಕೊಂಡೆ. ಇಷ್ಟರಲ್ಲಿ ಆ ಕೆಲಸದ ಛಾರ್ಜನ್ನೂ ವಹಿಸಿಕೊಂಡದ್ದಾಯಿತು. ನನ್ನ ಕರ್ಮವೂ ಆರಂ ಭವಾಯಿತು. ಮೂರುಘಂಟೆಕಾಲದ ಚಾಕರಿಹೋಗಿ ಐದುಘಂಟೆಯು ಚಾಕರಿಯಾಯಿತು. ಸುಮ್ಮನೆ ನಮಗೆತಿಳಿದದ್ದನ್ನು ಒದರಿಬರುವುದಕ್ಕೆ ಬದ ಲಾಗಿ, ಅವರಿವರು ಹೇಳಿದ ವ್ಯಾಜ್ಯಗಳ ವಿಷಯಗಳೆಲ್ಲವನ್ನೂ ಕೇಳಿ ನಿಜ ವಾದ ಪಕ್ಷವು ಯಾವುದೆಂಬುದನ್ನು ಯೋಚನೆಮಾಡಿ ಜಡ್ಜ್‌ಮೆಂಟ್ ಬರೆಯಬೇಕಾಗಿ ಬಂದಿತು. ಹಿಂದೆ ನನಗೆ ಮನೆಯಲ್ಲಾವಯೋಚನೆಯೂ ಇರಲಿಲ್ಲ. ಈಗ ಹಾಗಾಗಲಿಲ್ಲ. ಆ ಜಡ್ಜ್‌ಮೆಂಟನ್ನು ಹಾಗೆ ಬರೆಯ ಬೇಕು; ಈ ಜಡ್ಜ್‌ಮೆಂಟನ್ನು ಹೀಗೆ ಬರೆಯಬೇಕು; ಇದೇ ಯೋಚನೆ. ಇದಕ್ಕಾಗಿ ಲಾ ಪುಸ್ತಗಳೆಲ್ಲವನ್ನೂ ನೋಡಿ ಸೆಕ್ಷನ್‌ಗಳೆಲ್ಲವನ್ನೂ ಜ್ಞಾಪಕ ವಿಡಬೇಕಾಯ್ತು. ಇದಕ್ಕೋಸ್ಕರ ಕೋರ್ಟಿನಲ್ಲಿ ಹೋಗಿ ಕೆಲಸಮಾಡು ವುದಲ್ಲದೆ ಮನೆಯಲ್ಲಿ ಬೇರೆ ನಾಲ್ಕೈದುಘಂಟೆಗಳಕಾಲ ಕೆಲಸಮಾಡಬೇ ಕಾಯಿತು. ಮನಸ್ಸಮಾಧಾನವಿಲ್ಲ. ಸರಿಯಾಗಿ ಊಟತಿಂಡಿಗಳಿಲ್ಲ. ನಿದ್ರೆಯಂತೂ ಇಲ್ಲವೇ ಇಲ್ಲ. ಮೂರುಹೊತ್ತೂ ಯೋಚನೆ. ಮನೆ ಯಲ್ಲೇನೋ ಪರಿಚಾರಕರಿಗೂ ಇತರ ಅನುಕೂಲತೆಗಳಿಗೂ ಕಡಮೆ ಇಲ್ಲ. ಜನರು ಇದನ್ನೆಲ್ಲಾನೋಡಿ "ಅವನು ಎಂತಹ ಪುಣ್ಯವಂತನಪ್ಪಾ! ಸಾರೋಟುಗಾಡಿ, ಬಂಗಲೆಮನೆ, ಮನೆಯಲ್ಲಿ ಪರಿಚಾರಕರು, ಇತರ ಬೇಕಾದ ಅನುಕೂಲತೆಗಳು, ಕೈ ತುಂಬ ಸಂಬಳ, ಬೇಕಾದ ಊಟ ಉಡಿಗೆ ಇತ್ಯಾದಿಗಳಿಗೇನೂ ಕಡಮೆಯಿಲ್ಲ, ಬಂಧುಬಳಗಗಳಿಗೆ ಕಡಮೆಯಿಲ್ಲ, ಅವನೀಗ ಪುಣ್ಯವಂತನೆಂದರೆ ಪುಣ್ಯವಂತ. ಸೌಖ್ಯವಾಗಿ

ದೊರೆಯು ಹಾಗಿದ್ದಾನೆ" ಎನ್ನುತ್ತಿದ್ದರು. ನಿಶ್ಚಯ; ಅವರು ಹೇಳುವ
ಇತರ ಅನುಕೂಲಗಳಿದ್ದುವೇನೋ ನಿಶ್ಚಯವೇ ಸರಿ. ಏನಿದ್ದರೇನು?
ನನ್ನ ಮನಸ್ಸಿಗೆಮಾತ್ರ ಕೊಂಚವೂ ಸಮಾಧಾನವಿರಲಿಲ್ಲ. ಅದಿಲ್ಲದಿದ್ದ
ಮೇಲೆ ಯಾವುದಿದ್ದರೆ ತಾನೆ ಸುಖವೆಲ್ಲಿ ಬರಬೇಕು? ಸುಖವೆಂದರೆ ಬರೇ
ಊಟ ತಿಂಡಿ, ಉಡಿಗೆ ತೊಡಿಗೆ, ಪರಿಚಾರಕರು, ಬಂಧು ಬಳಗಗಳು,-
ಇವೇ ಆಗಿದ್ದರೆ ನನಗೂ ಸುಖವೇ ಆಗುತ್ತಿತ್ತು. ಆದರೆ ಅವು ಕೊಂಚಮ
ಟ್ಟಿಗೆ ಸುಖಸಾರ್ಥಕಗಳೇ ಹೊರತು ಅವುಗಳೇ ಸುಖಗಳಲ್ಲ. ಸುಖವೆಂದರೆ
**ಮನೋ ನೆಮ್ಮದಿಯೇ.** ಅದೊಂದಿದ್ದರೆ ಯಾವುದಿದ್ದರೂ ಇಲ್ಲದಿದ್ದರೂ
ಸುಖವೇ. ಅದೊಂದಿಲ್ಲದೆ ಅರಮನೆ, ಮೋಟಾರ್‌ಗಳು, ದಾಸದಾಸಿಯರು,
ಇತರ ಎಲ್ಲಾ ಅನುಕೂಲತೆಗಳು ಎಲ್ಲವೂ ಇದ್ದರೂ ವ್ಯರ್ಥವೇಸರಿ. ಎಂದು
ನನ್ನ ಮನಸ್ಸಿಗೆ ತೋರಿತು. ನಾನು ಡ್ರೆಸ್ ಹಾಕಿಕೊಳ್ಳುವುದೂ, ಊಟ
ಮಾಡುವುದೂ, ವಾಹನಗಳಲ್ಲಿ ಹೋಗುವುದೂ ಇವೆಲ್ಲವೂ ನನಗೆ ಮನಸ್ಸ
ಮಾಧಾನವಿಲ್ಲದ್ದರಿಂದ, ಮುಳ್ಳು ಚುಚ್ಚಿದಹಾಗೆಯೆ ಆಗುತ್ತಿದ್ದಿತು. ಈ
ನನ್ನ ಸ್ಥಿತಿಯು ಇತರರಿಗೆ ಹೇಗೆ ಗೊತ್ತಾಗಬೇಕು? ಇರಲಿ. ನನ್ನ ಕೆಲಸದ
ಸ್ಥಿತಿಗತಿಗಳು ಇಂತಹುದೆಂಬುದು ನಿಮಗೆ ಗೊತ್ತಾಯಿತಷ್ಟೆ! ಕೋರ್ಟ
ನಲ್ಲಿ ಕೇಸುಗಳೆಲ್ಲವೂ ಬೇಗನೆ ಇತ್ಯರ್ಥವಾಗುತ್ತಿರಲಿಲ್ಲ. ಸರಿ; ಪ್ರತಿಯೊಂದ
ನ್ನು (ಮುಂದಕ್ಕೆಹಾಕುವುದು) ಅಡ್ಜರ್ನ್ ಮಾಡುವುದೇಕೆಲಸ. ಇಷ್ಟರ
ನಂತರ ಒಂದೊಂದು ಕೇಸು ಇತ್ಯರ್ಥವಾಗಬೇಕಾದರೆ ವಾದಿ ಪ್ರತಿವಾದಿ
ಗಳು 20–30 ಸಲ ಕೋರ್ಟಗೆ ಬಂದು ಹೋಗಬೇಕಾಯಿತು. ಇದ
ರಿಂದ ಅವರುಗಳಿಗಾದ ದ್ರವ್ಯ ಮತ್ತು ಶರೀರದ ಕಷ್ಟ ನಷ್ಟಗಳಿಗೆ ಎಲ್ಲೆ
ಇಲ್ಲದಂತಾಯಿತು. ಆದರೆ ಲಾಯರುಗಳಿಗೇನೋ ಬಹಳ ಖುಷಿ. ಇಷ್ಟಾ
ಯಿತೋ ಇಲ್ಲವೋ? ಜನರೆಲ್ಲರೂ ನನ್ನನ್ನು ಶಪಿಸುವುದಕ್ಕೆ ಮೊದಲು
ಮಾಡಿದರು. ಇದಾವ ಅನಿಷ್ಟ ಮುಂಡೇಗಂಡನಿಗೆ ದೇವರು ಈ ಕೆಲಸವನ್ನು
ಕೊಟ್ಟನಪ್ಪ! ಇವನ ಮನೆ ಹಾಳಾಗ ನಿತ್ಯವೂ ಅಡ್ಜರ್ನ್ ಅಡ್ಜರ್ನ್ ಎಷ್ಟು
ಸಲ? ಲೆಕ್ಕವಿಲ್ಲ, ಪತ್ರವಿಲ್ಲ; ಹೇಳುವವರಿಲ್ಲ, ಕೇಳುವವರಿಲ್ಲ; ಈಗಾಗಲೆ
ಐದಾರು ಸಾವಿರ ರೂಪಾಯಿಗಳು ಕೈಬಿಟ್ಟುಹೋದುವು. ಸುತ್ತಿದ್ದಕ್ಕಂತೂ
ಲೆಕ್ಕವೇಇಲ್ಲ. ಇಷ್ಟೂ ಆಗಿ ಕೊನೆಗೆ ಏನೇನು ಜಡ್ಜ್‌ಮೆಂಟ್ ಬರೆದು
ಹಾಳಾಗಿ ಹೋಗುತ್ತಾನೋ, ಬಲ್ಲವರಾರು? ಎಂದು ನನ್ನನ್ನು

ಎಲ್ಲೆಲ್ಲಿಯೂ ಬೈಯ್ಯುವುದಕ್ಕೆ ಆರಂಭಿಸಿದರು. ವಾಚಕರೇ! ಈಗ ನೋಡಿರಿ ನನ್ನ ಸೌಖ್ಯವನ್ನು!! ಹಿಂದೆ ಹೇಳಿದಂತೆ ಮನೆಯಲ್ಲೇನೋ ಎಲ್ಲಾ ಅನುಕೂಲಗಳೂ ಇವೆ. ಏನಿದ್ದರೇನು? ನನ್ನ ಹಣೆಯ ಬರಹ! ನನ್ನ ಯೋಚನೆಯಿಂದ ಅವುಗಳೆಲ್ಲವೂ ಅಷ್ಟ್ಯಾಅಷ್ಟು ದುಃಖಮಯ ವಾಗಿ ಇತ್ತೇ ಹೊರತು ಮತ್ತೇನೂ ಇಲ್ಲ. ಇದು ಇತರರಿಗೆ ಹೇಗೆ ಗೊತ್ತಾಗಬೇಕು? ಒಟ್ಟನಲ್ಲಿ ನನಗಂತೂ **ಒಬ್ಬ ಕಡುಬಡವನಿಗಿರು ವಷ್ಟು ಸೌಖ್ಯವೂ ಇರಲೇ ಇಲ್ಲ.** ಇರಲಿ; ಮುಂದಿನ ವಿಷಯವನ್ನು ಕೇಳಿರಿ. ಹಿಂದೆ ಹೇಳಿದಂತೆ ನನಗೆ ಬೇರೆ ಸುಖವಿರಲಿಲ್ಲವಾದುದರಿಂದ ಈ ಕೆಲಸವನ್ನು ಬಿಟ್ಟು ಬೇರೆ ಮತ್ತಾವುದಾದರೂ ಕೆಲಸಕ್ಕೆ ಹೋಗ ಬೇಕೆಂಬ ಯೋಚನೆಯಾಯ್ತು. ಅಷ್ಟರಲ್ಲಿ ಡಿಸ್ಟ್ರಿಕ್ಟ್ ಡೆಪ್ಯುಟೀಕಮಿಷ ನರ್ ಕೆಲಸ ಒಂದು ಖಾಲಿಬಿತ್ತು. ಮನೆಯವರಿಗೂ ಈ ವಿಷಯವು ತಿಳಿಯಿತು. ಅವರೂ ಸಹ ಆ ಕೆಲಸಕ್ಕೆ ಹೋಗುವುದು ಒಳ್ಳೆಯದೆಂದರು. ಅವರ ಉದ್ದೇಶ್ಯವು ಮತ್ತೇನೂ ಇಲ್ಲ. ಸಂಬಳವು ಇನ್ನೂ ಹೆಚ್ಚಾಗಿ ಬರುವುದೆಂಬುವುದೇ. ನನಗಾದರೂ ಆ ಕೆಲಸದಲ್ಲಿ ಸೌಖ್ಯವೆಷ್ಟರ ಮಟ್ಟಿಗಾಗಬಹುದೆಂಬುದು ಗೊತ್ತಿಲ್ಲದಿದ್ದರೂ ಸದ್ಯಃ ಈ ಕೆಲಸದ ಕಷ್ಟವು ತಪ್ಪಿದರೆ ಸಾಕೆಂದಿತ್ತು. ಅದರಂತೆ ಆ ಕೆಲಸಕ್ಕೆ ಅಪ್ಲಿಕೇಷನ್ ಹಾಕಿ ದ್ದೂ ಆಯಿತು.

ಕೊಂಚ ದಿನಗಳಲ್ಲಿ ಆ ಕೆಲಸವೂ ಸಹ ಸ್ಯಾಂಕ್ಷನ್ ಆಗಿ ಕೆಲಸಕ್ಕೆ ಆರ್ಡರ್ ಬಂದಿತು. ಮನೆಯವರ ಸಂತೋಷವನ್ನ ಹೇಳತೀರದು. ನನಗಾದರೂ ಆ ಕೆಲಸಕ್ಕೆ ಹೋಗುವವರೆಗೂ ಸಂತೋಷವೇ ಆಗಿತ್ತು. ಕೆಲಸದ ಛಾರ್ಜನ್ನೂ ವಹಿಸಿಕೊಂಡದ್ದಾಯಿತು. ಮನೆಯ ವೈಭವಗ ಳನ್ನು ಹೇಳಿತೀರದು. ಐದಾರುಜನ ಜವಾನರು, ಮೋಟಾರುಗಾಡಿ, ಮನೆಗೆ ಬಂದು ಹೋಗುವ ಕೈಕೆಳಗಿನ ಅಧಿಕಾರಿಗಳು ಎಷ್ಟೋಜನ, ಎಲ್ಲೆಲ್ಲೂ ಗೌರವ, ಕಂಡಕಂಡವರೆಲ್ಲರೂ ಕೈಮುಗಿಯುವುದೇ. ಅವನೇ ನಪ್ಪಾ ಡಿಸ್ಟ್ರಿಕ್ಟಿಗೇನೇ ಪ್ರಭುಎನ್ನುವುದು? ಈ ರೀತಿ ಈ ಕೆಲಸಕ್ಕೆ ಸೇ ರಿದ ಕೆಲವು ದಿನಗಳವರೆಗೆ ನಾನು ಸರ್ಕೀಟು ಹೊರಡದೆ ಊರಿನಲ್ಲೆ ಇದ್ದುಕೊಂಡಿದ್ದು ಆಫೀಸಿಗೆ ಹೋಗಿ, ಅಸಿಸ್ಟೆಂಟ್ ಕಮಿಷನರ್‌ರಿಗೂ

ಅಮಲ್ದಾರರುಗಳಿಗೂ ಆವಶ್ಯಕವಾದ ವಿಷಯುಗಳಲ್ಲಿ ನಾಲ್ಕೈದುಆರ್ಡರು ಗಳನ್ನು ಕೊಟ್ಟು, ಗುಮಾಸ್ತರುತಂದ ಕಾಗದಪತ್ರಗಳಿಗೆಲ್ಲ ರುಜುಹಾಕಿ ಮನೆಗೆ ಬಂದುಬಿಡುತ್ತಿದ್ದೆ. ಜನರೆಲ್ಲರೂ ಈ ಡೆಪ್ಯುಟೀಕಮಿಷನರು ಹೇಗೋ ಕಾಣೆ' ಹಿಂದಿನವರ ಹಾಗೆಯೊ? ಹೇಗೋ ನೋಡಬೇಕು ಎನ್ನುತ್ತಿದ್ದರು. ಹೀಗೆಯೇ ಕೆಲವು ದಿನಗಳು ಕಳೆದುವು. ಆ ಮೇಲೆ ಪುನಃ ನನ್ನ ಗ್ರಹಚಾರ ಕರ್ಮಕ್ಕೆ ಆರಂಭವಾಯಿತು. ಇಷ್ಟು ಹೊತ್ತಿಗೆ ಮಳೆಹೋಯಿತು. ಕ್ಷಾಮಬಂದಿತು. ಡಿಸ್ಟ್ರಿಕ್ಟಿನ ಮೂಲೆ ಮೂಲೆ ಗಳಲ್ಲೂ ಜನರು ಹೊಟ್ಟೆಗಿಲ್ಲದೆ ಸಾಯುತ್ತಾ ಬಂದರು. ಇದಕ್ಕೋ ಸ್ಕರ ಮೇಲಧಿಕಾರಿಗಳಿಂದ "ಕೂಡಲೆ ಎಲ್ಲವನ್ನೂ ನೆಟ್ಟಗೆ ಮಾಡಬೇ ಕೆಂದು" ನನಗೊಂದು ಹುಕುಮು. ಆ ಒಡನೆಯೇ ನಾನೂ ಕೂಡ "ಆಯಾ ತಾಲ್ಲೂಕುಗಳ ಮೂಲೆ ಮೂಲೆಗಳಿಗೂ ಹೋಗಿ ಪ್ರಜೆಗಳ ತೊಂದರೆಯುನ್ನೆಲ್ಲಾ ನಿವಾರಣೆಮಾಡಬೇಕು. ಆದರೆ ಇದಕ್ಕಾಗಿ ಸರ್ಕಾ ರದಿಂದ ಮಾತ್ರ ಮೂರು ಕಾಸೂ ಸಿಕ್ಕುವಂತಿಲ್ಲ. ಪುಷ್ಟರಾದ ಜನಗ ಳಿಂದಲೇ ಚಂದಾರೂಪವಾಗಿಯೂ ಧಾನ್ಯಗಳರೂಪದಲ್ಲಿಯೂ ವಸೂಲ್ಮಾಡಿ ಕಷ್ಟಪಡುವ ಜನಗಳಿಗೆಲ್ಲ ತಕ್ಕಷ್ಟು ಅನುಕೂಲಗಳನ್ನು ಮಾಡಿಡ ಬೇ ಕಲ್ಲದೆ, ಆ ರೀತಿ ಸರಿಯಾದ ಏರ್ಪಾಡುಗಳನ್ನುಮಾಡಿದ ವಿಷಯದಲ್ಲಿ ಈ ಆಫೀಸಿಗೆ ಆಯಾ ಕೂಡಲೆ ರಿಪೋರ್ಟುಮಾಡಬೇಕು. ಇಲ್ಲದಿದ್ದರೆ ಕ್ರೂರವಾದ ಶಿಕ್ಷೆಗೆ ಪಾತ್ರರಾಗಬೇಕಾಗುವುದು." ಇತ್ಯಾದಿಯಾಗಿ ಎಲ್ಲಾ ಅಸಿಸ್ಟೆಂಟ್ ಕಮಿಷನರುಗಳಿಗೂ ಅಮಲ್ದಾರರುಗಳಿಗೂ ಸ್ಟ್ರಿಕ್ಟ್ ಆರ್ಡರುಗಳನ್ನು ಕೊಟ್ಟುಬಿಟ್ಟೆ. ಇದನ್ನು ಕೊಟ್ಟೊಡನೆಯೆ ಅವರಿಗೆಲ್ಲ ಭೇದಿಗೆ (for motion) ಕೊಟ್ಟಹಾಗಾಯಿತು. ಪಾಪ! ಅವರಲ್ಲಿ ಎಷ್ಟೋಜನ ಸರ್ವಿಸ್ ಆದವರೂ, ಇನ್ನು ಕೆಲವರು ಹೊಸದಾಗಿ ಕೆಲಸಕ್ಕೆ ಸೇರಿರುವವರು. ಅವರೆಲ್ಲರೂ ಈ ಆರ್ಡರನ್ನು ನೋಡಿದ ಕೂಡಲೆ "ಒಳ್ಳೇಡೆಪ್ಯುಟೀಕಮಿಷನರಾದನಲ್ಲಪ್ಪಾ! ಈಗಿನ ಕಾಲದಲ್ಲಿ ಜನಗಳಲ್ಲಿ ಮೂರು ಕಾಸೂ ಹುಟ್ಟುವುದಿಲ್ಲ. ಅದರಲ್ಲೂ ಈಗ ಮಳೆ ಹೋಗಿಬಿಟ್ಟದೆ! ಈಗಂತೂ ಜನಗಳು ದವಸವನ್ನಾಗಲೀ ದ್ರವ್ಯವನ್ನಾ ಗಲೀ ಕೊಡುವಂತೆಯೇ ಇಲ್ಲ. ನಾವು ಹಳ್ಳಿಗಳಿಗೆ ಹೋದರೂ ಪ್ರಯೋ ಜನವಿಲ್ಲ. ಹೋಗದಿದ್ದರೆ ಗತಿಇಲ್ಲ! ಎಲ್ಲಿ ಇವನು ನಮ್ಮ ಪೆನ್ಷನ್ನಿಗೆ

ಕಲ್ಲುಹಾಕುತ್ತಾನೋ? ಮೊದಲೇ ರಿಟ್ರಂಚ್‌ಮೆಂಟು! ಈಗಲೇ ನಮ್ಮ ಅಭಿವೃದ್ಧಿಗೆ ಎಲ್ಲಿ ಕಲ್ಲುಹಾಕುತ್ತಾನೋ? ಇವನಿಗೇನು ಕಷ್ಟ! ಇದ್ದಜಾಗದಲ್ಲಿ ಸುಖವಾಗಿ ಮೇಲಕ್ಕೆ ಕೆಳಕ್ಕೆ ಮೋಟಾರಿನಲ್ಲಿ ತಿರಿಗಿ ಕೊಂಡು, ತನ್ನ ಕೈಯಲ್ಲಿ ಅಧಿಕಾರವಿದೆಯಲ್ಲಾ ಎಂದು ಹೇಳಿ, ಒಂದು ಆರ್ಡರನ್ನುಕೊಟ್ಟುಬಿಡುತ್ತಾನೆ! ಇಲ್ಲಿ ಮೂರುಹೊತ್ತೂ ಜನಗಳಲ್ಲಿ ಓಡಾ ಡುವ ನಮಗಲ್ಲವೆ ಆ ಕಷ್ಟಗಳು ಗೊತ್ತು? . . . ಇತ್ಯಾದಿಯಾಗಿ ಹೇಳಿ ಕೊಂಡು ಅಧಿಕಾರಿಗಳೆಲ್ಲರೂ ಬಯ್ಯುವುದಕ್ಕೆ ಮೊದಲುಮಾಡಿದರು. ಆದರೆ ಕೆಲವರು ಬಡವರು ಪರವಾಇಲ್ಲ "ನಮ್ಮ ಡೆಪ್ಯುಟೀ ಕಮಿಷನರು ಬಹಳ ಒಳ್ಳೆಯವರು. ಬಡವರನ್ನು ಕಂಡರೆ ಅವರಿಗೆ ಪ್ರೀತಿ. ಆದುದರಿಂದ ಈರೀತಿ ನಮಗೆ ಸಹಾಯಮಾಡಿಸುತ್ತಿರುವರು" ಇತ್ಯಾದಿಯಾಗಿ ಹೇಳು ತ್ತಾ ಸ್ವಲ್ಪಹೊಗಳಿಯೂ ಹೊಗಳಿದರು.

ಇಷ್ಟುಹೊತ್ತಿಗೆ ಕಂದಾಯ ವಸೂಲೀಕಾಲವು ಬಂದಿತು. ನನ್ನ ಡಿಸ್ಟ್ರಿಕ್ಟಿನಲ್ಲಿ ಹಿಂದಿನ ವರ್ಷದ ಬಾಕಿಯೇ ಬಹಳವಾಗಿ ನಿಂತಿತ್ತು. ಈಸಾರಿ ಕಂದಾಯವೆಲ್ಲವನ್ನೂ ಬಾಕಿ ಇಲ್ಲದಂತೆ ವಸೂಲ್ಮಾಡಬೇಕೆಂದು ಆರ್ಡರ್ ಕೊಟ್ಟೆ. ಇಷ್ಟುಹೊತ್ತಿಗೆ ಮೇಲೆಹೇಳಿದಂತೆ ಕ್ಷಾಮವು ತಲೆದೋ ರಿದ್ದರಿಂದ, ಪ್ರಜೆಗಳು ಕಂದಾಯವನ್ನುಕೊಡಲು ಶಕ್ತಿ ಇಲ್ಲದವರಾಗಿ ರಿಮಿಷನ್ ಮಾಡಿಕೊಡಬೇಕೆಂದು ಕೇಳಿಕೊಂಡರು. ಅದರಂತೆಯೇ ಮೇಲ ಕ್ಕೆ ಬರೆದೆನು. ಆದರೇನು? ಮೇಲಿನವರು "ಈಗ ಖಜಾನೆ (ಟ್ರಜರಿ) ಯಲ್ಲಿ ಹಣವಿರುವುದಿಲ್ಲವಾದುದರಿಂದ ಕೂಡಲೇ ಕಂದಾಯವೆಲ್ಲವನ್ನೂ ವಸೂ ಲ್ಮಾಡಬೇಕು. ರಿಮಿಷನ್‌ಮಾಡಲು ಸಾಧ್ಯವಿಲ್ಲ." ಎಂದು ಆರ್ಡರ್ ಕೊಟ್ಟ ರು. ಈಗ ನನಗೆ ಉಭಯಸಂಕಟಕ್ಕಿಟ್ಟಿತು. ಪ್ರಜೆಗಳಿಗೆ ಕಂದಾಯ ಕೊಡು ವುದಕ್ಕೆ ಶಕ್ತಿಇಲ್ಲ. ಸರಕಾರಕ್ಕೆ ದುಡ್ಡಿಲ್ಲ. ನಾನು ಸುಮ್ಮನೆ ಕುಳಿತರೆ ನನಗೆ ಮೇಲಿನವರಿಂದ ಒದೆ ಬೀಳುವುದು. ಕಂದಾಯವನ್ನೆಲ್ಲಾ ವಸೂ ಲ್ಮಾಡಿಬಿಡುವಂತೆ ಬಲವಾದ ಆರ್ಡರ್ ಕೊಟ್ಟರೆ ಪ್ರಜೆಗಳಿಗೆ ತೊಂದರೆ ಯಾಗುವುದು. ಏನುಮಾಡಲಿ? ಯತ್ನವಿಲ್ಲದೆ ಹೋಯಿತು; ಹೇಗಾದರೂ ಹೋಗಲಿ. ಇವರ ಮಧ್ಯೆ ನಮ್ಮ ಕೆಲಸವು ಉಳಿಯ ಬೇಕೋ, ಇಲ್ಲವೋ? ಸರಿ; ಇದಕ್ಕೋಸ್ಕರ ಎಲ್ಲಾ ಕಂದಾಯವನ್ನೂ ವಸೂಲ್ಮಾಡುವಂತೆಯೂ,

ಹಾಗೆ ಕೊಡದಿದ್ದರೆ ಸ್ಥಿರ ಚರ ಸೊತ್ತುಗಳನ್ನು ಹರಾಜು ಮಾಡುವಂತೆ ಯೂ ಬಲವಾದ ಆರ್ಡರ್ ಕೊಟ್ಟುಬಿಟ್ಟೆ. ಇದರಿಂದ ಬಡವರ ಜಮೀನು ಗಳೆಲ್ಲವೂ ಆರು ಕಾಸಿನದು ಮೂರು ಕಾಸಿಗೆ ಹರಾಜಾಗಿ ಬಡವರಿಗೆಲ್ಲ ಆಧಾರವೇ ಇಲ್ಲದ ಹಾಗಾಗುವ ಕಾಲ ಬಂದಿತು. ಡಿಸ್ಟ್ರಿಕ್ಟಿನ ಎಲ್ಲಾ ಭಾಗ ಗಳಿಂದಲೂ ಜನಗಳಿಂದ ಅರ್ಜಿಗಳೂ, ರಿಪೋರ್ಟುಗಳೂ ಮೇಲಿಂದಮೇಲೆ ಬರುವುದಕ್ಕೆ ಆರಂಭವಾದುವು. ಅವುಗಳೆಲ್ಲವನ್ನು ನೋಡುತ್ತಲೆ, ಅವರ ಕಷ್ಟವನ್ನು ನೋಡಿ ನನಗೆ ಅನ್ನ, ನೀರು, ನಿದ್ರೆ ಇವುಗಳು ಬೇಡವಾಯಿ ತು. ಜನರೆಲ್ಲರೂ ಈ ಹಾಳು ಡೆಪ್ಯುಟೀಕಮಿಶನರು ಬಂದು ನಮ್ಮಗಳ ಹೊಟ್ಟೆಯಮೇಲೆಲ್ಲ ಕಲ್ಲುಹಾಕಿದರೋ! ಎಂದು ಹೇಳುವುದಕ್ಕೆ ಹತ್ತಿದರು. ಹಿಂದೆ ನಾನು ಸಬ್‌ಜಡ್ಜಿಯಾಗಿದ್ದಾಗ ಬರೇ ಕಕ್ಷಿಗಾರರು ಕೆಲವರು ಮಾತ್ರ ಹೊಡೆದುಕೊಳ್ಳುತ್ತಿದ್ದರು. ಈಗ ಹಾಗಾಗಲಿಲ್ಲ. ಒಂದು ಡಿಸ್ಟ್ರಿಕ್ಟಿನ ಲ್ಲಿರತಕ್ಕ ಪ್ರಜೆಗಳೆಲ್ಲರೂ ಹೊಡೆದು ಕೊಳ್ಳುವುದಕ್ಕೆ ಮೊದಲು ಮಾಡಿದ ರು. ವಾಚಕರೆ! ಈಗ ನೀವೇ ಹೇಳಿರಿ!! ನನಗೆ ಈಗ ಸೌಖ್ಯವು ಎಷ್ಟರ ಮಟ್ಟಿಗೆ ಇದ್ದಿರಬಹುದು? ಒಂದುಕಡೆ ಪ್ರಜೆಗಳಿಂದ ಬೈಗಳು; ಮತ್ತೊಂದು ಕಡೆ ಮೇಲಧಿಕಾರಿಗಳಿಂದ ಮೇಲೆ ಮೇಲೆ ಆಕ್ಷೇಪಣೆಗಳು;– ಇವೆರಡರ ಮಧ್ಯೆಸಿಕ್ಕಿಕೊಂಡು ನರಳುವಗತಿ ನನ್ನದಾಯಿತು. ಮೇಲಧಿಕಾರಿಗಳಿಗೆ ಪ್ರಜೆಗಳ ಗೋಳು ಗೊತ್ತಾಗುವಂತಿಲ್ಲ. ಪ್ರಜೆಗಳಿಗೆ ಮೇಲಧಿಕಾರಿಗಳ ಆರ್ಡ ರು ಗೊತ್ತಾಗುವಂತಿಲ್ಲ. ಅಂತೂ ಇವೆರಡೂ ಸೇರಿ ನನ್ನ ಪ್ರಾಣವನ್ನು ಹಿಂಡುತ್ತಿತ್ತು. ಈ ಸ್ಥಿತಿಯು ನನಗೆ ಸರಿಬೀಳದೆ ರಜಾ ತೆಗೆದುಕೊಳ್ಳಬೇ ಕು, ಇಲ್ಲವೆ ಬೇರೆ ಕೆಲಸಕ್ಕೆ ಹೋಗಬೇಕು, ಇಲ್ಲವೆ ಸರಕಾರಿ ಕೆಲಸವನ್ನೇ ಬಿಟ್ಟುಬಿಡಬೇಕು ಎಂಬದಾಗಿ ತೋರಿತು. ಅದರಂತೆ ಕೂಡಲೆ ರಜಾಕ್ಕೆ ಬರೆದುಕೊಂಡೆ. ಈಗ ರಜಾ ಕೊಡಲು ಸಾಧ್ಯವಿಲ್ಲವೆಂದರು. ಕೆಲಸವನ್ನೇ ಬಿಟ್ಟುಬಿಡೋಣವೆಂದು ಯೋಚಿಸಿದೆ. ಅದೂ ನನಗೆ ಸಾಧ್ಯವಿಲ್ಲವಾಗಿ ಕಂಡಿತು. ಹಾಗಾದರೆ ಇನ್ನೂ ವಿಶೇಷ ಜವಾಬ್ದಾರಿ ಇಲ್ಲದಿರತಕ್ಕ ಮುಖ್ಯ ವಾಗಿ ಜನಗಳಿಗೆ ವಿಶೇಷ ತೊಂದರೆಯನ್ನುಂಟುಮಾಡದಿರತಕ್ಕ ಕೆಲಸ ವಾವುದೆಂದು ಯೋಚಿಸಿದೆ. ಹಾಗೆಯೇ ಯೋಚಿಸಲು ಇಂಜಿನಿಯರಿಂಗ್ ಕೆಲ ಸವೇ ಉತ್ತಮವೆಂದು ತೋರಿತು. ಸಂಬಳವೂ ಹೆಚ್ಚಾಗಿಯೇ ಸಿಕ್ಕುತ್ತದೆ. ಸ್ವತಃ ಕೆಲಸ ಮಾಡಬೇಕಾದುದೂ ಇಲ್ಲ. ಈಗಿನ ಹಾಗೆಯೇ ಕೊಂಚ

ಮಟ್ಟಿಗೆ ಸರ್ಕೀಟ್ ಮಾಡಬೇಕಾಗುವುದು. ಆದರೇನು? ಕೈ ಕೆಳಗಿನ ಅಧಿಕಾರಿಗಳು ಎಷ್ಟೋ ಜನರಿರುವರು. ಅದಕ್ಕಾಗಿ ಏನೂ ಕಷ್ಟಪಡಬೇಕಾದುದಿಲ್ಲ. ಜನಗಳಲ್ಲಿ ಬೈಸಿಕೊಳ್ಳುವ ರಗಳೆಯೂ ಇಲ್ಲ. ಇತ್ಯಾದಿಯಾಗಿ ಯೋಚಿಸಿ ಆ ಕೆಲಸಕ್ಕೆ ಒಂದು ಅಪ್ಲಿಕೇಶನ್ ಹಾಕಿದೆ. ಇಷ್ಟು ಹೊತ್ತಿಗೆ ಛೀಫ್ ಇಂಜಿನಿಯರೊಬ್ಬರು ಇದ್ದಕ್ಕಿದ್ದಹಾಗೆಯೇ ಕಾರಣಾಂತರದಿಂದ ಆ ಕೆಲಸಕ್ಕೆ ರಾಜಿನಾಮೆಕೊಟ್ಟರು. ಅಷ್ಟುಹೊತ್ತಿಗೆ ಎಂದರೆ ಸರಕಾರದವರ ಕೈಗೆ ಆ ರಾಜಿನಾಮೆಯು ಸೇರುವವೇಳೆಗೆ ಸರಿಯಾಗಿ ನನ್ನ ಅಪ್ಲಿಕೇಶನೂ ಅಲ್ಲಿಗೆ ಸೇರಿತು. ಆಕೂಡಲೆ ಸರಕಾರದವರು ಆ ರಾಜಿನಾಮೆಯನ್ನು ಅಂಗೀಕಾರಮಾಡಿ ನನಗೆ ಆ ಕೆಲಸವನ್ನು ಕೊಟ್ಟರು. ಆರ್ಡರು ಬಂದಿತು. ಸಂಬಳವೂ ಹೆಚ್ಚಾಯಿತು. ಯಥಾಸ್ಥಿತಿ ಹಿಂದಿನಂತೆಯೇ ಮನೆಯವರ ಸಂತೋಷಕ್ಕೆ ಪಾರವೇ ಇಲ್ಲ. ಹಿಂದಿನ ಕೆಲಸಗಳಲ್ಲಿಯೂ ಅವರಿಗೇನೂ ಕೊರತೆ ಇದ್ದಹಾಗೆ ನನಗೆ ಕಾಣಲಿಲ್ಲ; ಇರಲಿ. ಮುಂದಲ ವಿಷಯವನ್ನು ನೋಡೋಣ!

ಈ ಕೆಲಸದ ಛಾರ್ಜನ್ನು ತೆಗೆದುಕೊಂಡಮೇಲೆ ನನಗೆ ಹಿಂದಿನ ಕೆಲಸಗಳಿಗಿಂತಲೂ ಅನುಕೂಲವಾಗಿತ್ತೆಂದು ಹೇಳಬಹುದು. ಆಫೀಸಿಗೆ ಹೋಗಿ ಕೆಳಗಣ ಅಧಿಕಾರಿಗಳಿಗೆ ಕೊಡತಕ್ಕ ಸೂಚನೆಗಳನ್ನೂ, ಆರ್ಡರುಗಳನ್ನೂ ಕೊಟ್ಟು ಮನೆಗೆ ಬರುತ್ತಿದ್ದೆ. ಆಗಾಗ್ಗೆ ಡಿಸ್ಟ್ರಿಕ್ಟ್‌ಗಳಲ್ಲಿ ಸರ್ಕೀಟ್‌ಮಾಡುತ್ತಿದ್ದೆ. ಆದರೂ ಹಿಂದೆ ನಾನು ಅನುಭವಿಸಿದಷ್ಟು ಕಷ್ಟಗಳೇನೂ ನನಗೆ ಆಗುತ್ತಿರಲಿಲ್ಲ. ಹೀಗೆಯೇ ಕೆಲವು ತಿಂಗಳುಗಳು ಕಳೆದುವು. ಆದರೇನು? ಪುನಃ ನನ್ನ ಹಿಂದಿನ ಕರ್ಮವು ನನ್ನನ್ನು ಅನುಸರಿಸುವುದಕ್ಕೆ ಬಂದಿತು. ಇಷ್ಟು ಹೊತ್ತಿಗೆ ಮಳೆಕಾಲವು ಬಂದು ಎಲ್ಲಾಕಡೆಗಳಲ್ಲೂ ಯಥೇಚ್ಛವಾಗಿ ಮಳೆಯಾಗಿ ಕೆರೆಕಟ್ಟೆಗಳೆಲ್ಲ ಒಡೆದು ಹೋಗಿ ಎಷ್ಟೋ ಕೆರೆ ಕಟ್ಟೆಗಳು ಒಡೆದು ಹೋಗುವ ಸ್ಥಿತಿ ಬಂದಿತು. ಕೂಡಲೇ ನಾನು ಎಲ್ಲಾ ಅಸಿಸ್ಟೆಂಟ್ ಇಂಜಿನಿಯರರಿಗೂ ಓವರ್ಸಿಯರುಗಳಿಗೂ ಅಲ್ಲಲ್ಲಿನ ಕೆರೆಕಟ್ಟೆಗಳ ಸ್ಥಿತಿಯನ್ನು ಸರಿಯಾಗಿ ನೋಡಿಕೊಳ್ಳಬೇಕೆಂತಲೂ, ಆ ವಿಷಯವನ್ನು ನಿತ್ಯವೂ ತಪ್ಪದೆ ಈ ಆಫೀಸಿಗೆ ರಿಪೋರ್ಟ್ ಮಾಡಬೇಕೆಂತಲೂ ಆರ್ಡರ್ ಕೊಟ್ಟೆನು. ಅನಂತರ ನಿತ್ಯವೂ, ಆ ಕೆರೆ ಒಡೆಯಿತು, ಈ ಕಾಲುವೆ ಒಡೆದು

ಹೋಯಿತು, ಇತ್ಯಾದಿಯಾಗಿ ರಿಪೋರ್ಟುಗಳು ಬರುವುದಕ್ಕೆ ಮೊದಲಾಯಿತು. ಆಗ ಅವುಗಳಿಗೆ ತಕ್ಕ ಪರಿಹಾರಗಳನ್ನು ಬರೆದು ಕಳುಹಿಸಬೇಕಾಗಿ ಬಂದಿತು. ಇದರಿಂದ ನನಗೆ ಕೊಂಚ ಯೋಚನೆಗೆ ಕಾರಣವಾಗಿ ಕೆಲಸವೂ ಹೆಚ್ಚಾಯಿತು. ಇಷ್ಟು ಹೊತ್ತಿಗೆ ಸರಿಯಾಗಿ, ಎಲ್ಲಾ ನದಿಗಳಲ್ಲಿಯೂ ಪ್ರವಾಹ ಹೆಚ್ಚಿತು. ಆಗ ಒಂದು ದೊಡ್ಡ ನದಿಗೆ ಈಗಿನ ಕನ್ನಂಬಾಡಿ ಕಟ್ಟೆಯಂತಹುದೊಂದು ದೊಡ್ಡ ಅಣೆಕಟ್ಟನ್ನು ಹಾಕಿದ್ದರು. ಈ ಕಟ್ಟೆಗೆ ನಾಲ್ಕೈದು ದೊಡ್ಡ ನದಿಗಳ ನೀರು ಬಂದು ಸೇರುತ್ತಿತ್ತು. ಈ ಅಣೆಕಟ್ಟಿನ ಕೆಳಗೆ 1 ಮೈಲುದೂರದಲ್ಲಿ ನೂರಾರು ಸಣ್ಣ ಸಣ್ಣ ಹಳ್ಳಿಗಳೂ, ಲಕ್ಷಾಂತರ ಜನರೂ ಇದ್ದರು. ಆ ಹಳ್ಳಿಗಳಿಗೆಲ್ಲ ಎಲ್ಲಾದಕ್ಕೂ ಈ ಕಟ್ಟೆಯ ನೀರೇ ಆಧಾರವಾಗಿದ್ದಿತು. ಹೀಗಿರುವಾಗ, ಆ ಅಣೆಕಟ್ಟಿನ ಕಟ್ಟು ಮೇಲ್ಭಾಗದಲ್ಲಿ ಕೊಂಚಮಟ್ಟಿಗೆ ಪ್ರವಾಹದ ಹೆಚ್ಚಿಗೆಯಿಂದ ಸಡಿಲುತ್ತಿದೆಯೆಂದು ವರ್ತಮಾನಬಂತು. ಇದರಿಂದ ಆ ಕಟ್ಟೇನಾದರೂ ಒಡೆದು ಹೋದರೆ, ಮೇಲೆ ಹೇಳಿದಂತೆ ಲಕ್ಷಾಂತರಜನರೂ, ಗೋಕಾಯಿಗಳೂ, ಕೋಟ್ಯಾಂತರ ರೂಪಾಯಿಗಳೂ ಎಲ್ಲವೂ ನಷ್ಟವಾಗುವ ಸಂಭವವಿದ್ದಿತು. ಇದಕ್ಕೋಸ್ಕರ ಸರಕಾರದವರು ನನ್ನನ್ನೇ ಖುದ್ದಾಗಿಹೋಗಿ ಇತರ ಕೈಕೆಳಗಿನ ಅಧಿಕಾರಿಗಳನ್ನೂ ಆಳುಗಳನ್ನೂ ಕರೆದುಕೊಂಡು ಹೋಗಿ ಕಟ್ಟನ್ನು ಸರಿಮಾಡುವಂತೆ ಆರ್ಡರ್ ಕೊಟ್ಟರು. ಅದರಂತೆ ನಾನು ಅಲ್ಲಿಗೆ ಹೋಗಿ ಕೆಲಸಮಾಡಿಸುವುದಕ್ಕೆ ಆರಂಭಿಸಿದೆನು. ಆಗ ನನ್ನ ಕಷ್ಟವನ್ನು ಏನೆಂದು ಹೇಳುವಿರಿ? ಒಂದುಕಡೆ ಮಳೆಯಕಾಟ; ಮತ್ತೊಂದುಕಡೆ ಮೇಲೆ ಮೇಲೆ ಪ್ರವಾಹವು ಬಂದು ಕಟ್ಟೆಯು ಕಟ್ಟನ್ನು ಸಡಿಲಿಸುತ್ತಿತ್ತು; ಇನ್ನೊಂದುಕಡೆ ಜನರು ತಿರುಗಾಡಲು ಅವಕಾಶವಿರಲಿಲ್ಲ; ಅಡಿಗೆ ಊಟ ಮಾಡಿಕೊಳ್ಳಲು ಯಾರಿಗೂ ಅವಕಾಶವಿಲ್ಲ. ಹೀಗಿರುವಾಗ ಕೆಲಸಮಾಡುವುದು ಹೇಗೆ? ಮಾಡಿದ ಕೆಲಸವು ನಿಲ್ಲುವುದುತಾನೆ ಹೇಗೆ? ಆಗ ನನ್ನ ಮನಸ್ಸಿನ ಸ್ಥಿತಿಯು ಹೇಗಿರಬೇಕು? ಮೊದಲೆ ಕಪಿ, ಅದಕ್ಕೆ ಹುಚ್ಚುಹಿಡಿದಿರೋಣ, ಅದರ ಜೊತೆಗೆ ಮದ್ಯವನ್ನೂ ಕುಡಿದಿರೋಣ. ಇಂತಹ ಕಪಿಯ ಸ್ಥಿತಿಗಳು ಹೇಗಿರುವುವು? ಹಾಗೆಯೇ ನನ್ನ ಮನಸ್ಸಿನ ಸ್ಥಿತಿಯಾದರೂ ಆಗಿತ್ತು. ಒಂದು ಸ್ಥಳದಲ್ಲಿ ನಿಲ್ಲುವುದಕ್ಕೆ ಮನಸ್ಸಿಲ್ಲ, ಕೂರುವುದಕ್ಕೆ ಮನಸ್ಸಿಲ್ಲ, ಊಟವಿಲ್ಲ, ತಿಂಡಿ ಇಲ್ಲ, ನಿದ್ರೆ ಇಲ್ಲ, ಸನೂ ಇಲ್ಲ. ಹೀಗಿರುವಾಗ್ಗೆ ಕೆಲಸಮಾಡತಕ್ಕವರು

"ಕಟ್ಟತಕ್ಕ ಗಾರೆಕಲ್ಲುಕಟ್ಟಡವೆಲ್ಲವೂ ಪ್ರವಾಹದ ದೆಶೆಯಿಂದ ಕೊಚ್ಚಿ ಹೋಗುತ್ತಿರುವುದೆಂತಲೂ, ಅದೆಲ್ಲವೂ ನಮ್ಮ ಮೇಲೆಯೇ ಬಿದ್ದು ನಮಗೆ ಪೆಟ್ಟಾಗುವುದೆಂತಲೂ, ಇನ್ನು ನಮ್ಮ ಕೈಲಿ ಕೆಲಸಮಾಡುವುದಕ್ಕಾಗುವುದಿಲ್ಲವೆಂತಲೂ, ಕಟ್ಟೆಯು ಒಡೆದು ಹೋಗುವುದೇ ಸರಿಯೆಂತಲೂ ಹೇಳಿ ಬಿಟ್ಟರು." ಆಗ ವಾಚಕರೆ! ನನಗಾದ ವ್ಯಸನವನ್ನು ಏನೆಂದು ಹೇಳಲಿ! ದೊಡ್ಡ ಬೆಟ್ಟವೇ ಕಳಚಿಕೊಂಡು ನನ್ನಮೇಲೆ ಬಿದ್ದಹಾಗಾಯಿತು; ಏನೂ ತೋರಲೇ ಇಲ್ಲ; ಆಗ ನನಗೆ "ನನ್ನ ಹಿಂದಿನ ಕೆಲಸಗಳಲ್ಲಿ ಜನರಿಗೆ ಕಷ್ಟವಾದರೂ ಯಾರಿಗೂ ಪ್ರಾಣಾಪಾಯವಾಗಿರಲಿಲ್ಲ." ಈಗ ಹಾಗಲ್ಲ; ಕಟ್ಟೆ ಏನಾದರೂ ಒಡೆದು ಹೋಯಿತೆಂದರೆ ಲಕ್ಷಾಂತರ ಗೋಕಾಯಿಗಳೂ ಜನರೂ ಸತ್ತೇ ಹೋಗುವರಲ್ಲಾ!! ಎಂದು ಹೇಳಿ, ಹೇಗಾದರೂಮಾಡಿ ದೇವರು ನನ್ನನ್ನು ಈಸಾರಿ ಈ ಕಷ್ಟದಿಂದ ತಪ್ಪಿಸಿದರೆ ಸಾಕೆಂದು ತೋರಿತು. ಆದರೇನು? ಹೀಗೆಂದು ಸುಮ್ಮನೆ ಕೂರುವ ಹೊತ್ತಲ್ಲವಾದುದರಿಂದ ಬಹಳ ಯೋಚಿಸಿ, ಪ್ರವಾಹದ ವೇಗವು ಕಡಮೆಯಾಗುವುದಕ್ಕೋಸ್ಕರವಾಗಿ ಮೇಲುಭಾಗದಲ್ಲಿ, ಎಲ್ಲಾ ನದಿಗಳಿಗೂ ಕಟ್ಟರತಕ್ಕ ನಾಲೆಗಳ ಬಾಗಿಲನ್ನು ತೆರೆದು ಬಿಡುವಂತೆಯೂ, ಪುನಃ ಆ ನೀರು ನದಿಗೆ ಬರದ ಹಾಗೆ ನೀರನ್ನೆಲ್ಲವನ್ನೂ ಚದರಿಸಿ ಬಿಡುವಂತೆಯೂ ಏರ್ಪಾಡು ಮಾಡಿದೆ. ಇದರ ಜತೆಗೆ ಕಟ್ಟೆಯ ಆಚೆ ಈಚೆ ಕಡೆಗಳಲ್ಲಿ ಏಳೆಂಟು ನೀರೆತ್ತುವ ಪಂಪುಗಳನ್ನು ತರಿಸಿ, ಇರಿಸಿ, ಅವುಗಳಿಂದ ನೀರನ್ನು ಎತ್ತಿ, ಬೇರೆಕಡೆಗೆ ನೀರು ಹೋಗುವಂತೆಮಾಡಿ, ಕಟ್ಟೆಯ ಮೇಲೆ ನೀರು ಹರಿದು ಹೋಗದಂತೆಮಾಡಿದೆ. ಇವುಗಳದೆಶೆಯಿಂದ ಕೊಂಚಮಟ್ಟಿಗೆ ಪ್ರವಾಹದ ವೇಗವು ಕಡಮೆಯಾಯಿತು. ಇಷ್ಟುಹೊತ್ತಿಗೆ ನನ್ನ ಪುಣ್ಯವಶದಿಂದ ಮಳೆಯೂ ನಿಂತು ಬಿಸಿಲು ಕಾಯಿತು. ಬಿಸಿಲು ಕಾದದ್ದರಿಂದ ಸ್ವಾಭಾವಿಕವಾಗಿಯೇ ಪ್ರವಾಹವು ಇಳಿದುಬಿಟ್ಟಿತು. ಇದರ ಜತೆಗೆ ಕೆಲಸಗಾರರೂ ಕೆಲಸಮಾಡುತ್ತಲೂ ಬಂದದ್ದರಿಂದ ಕಟ್ಟೆಯು ಮತ್ತೂ ಭದ್ರವಾಗಿ ನಿಂತಿತು. ಅದನ್ನು ನೋಡಿ ನನಗೆ ಹರ್ಷವಾಗಿ ನನ್ನನ್ನು ಆಗತಾನೆ ಹುಟ್ಟಿದಹಾಗೆ ಭಾವಿಸಿಕೊಂಡೆನು. ಇಷ್ಟೆಲ್ಲಾ ಆಗಲು ಮೂರು ದಿವಸಗಳಪೂರ್ತ ಹಿಡಿಸಿದುವು. ಈ ಮೂರು ದಿವಸಗಳೂ ನಾನು ಪಟ್ಟ ಶ್ರಮವನ್ನು ಹೇಳಿತೀರದು. ಮೂರು ಹೊತ್ತೂ ಯೋಚನೆ; ಊಟತಿಂಡಿಗಳಿಲ್ಲ; ನಿದ್ರೆಯಂತೂ ಇಲ್ಲವೇ ಇಲ್ಲ. ಈರೀತಿ ನಿದ್ರೆ

ಇಷ್ಟದಿವ್ಸರಿಂದ ನನಗೆ ಏನೋ ಒಂದು ತರಹ ಹುಚ್ಚು ಹಿಡಿದಹಾಗಾಯಿತು. ಕೂಡಲೇ ಐದು ದಿನಗಳ ಕ್ಯಾಜುವಲ್‌ರಜಾಕ್ಕೆ ಸರಕಾರಕ್ಕೆ ಬರೆದು ಕೊಂಡು ಮನೆಗೆ ಬಂದುಬಿಟ್ಟೆ.

---

## ಅಧ್ಯಾಯ ೬

ಮೇಲೆ ಹೇಳಿದಂತೆ ಮನೆಗೆ ಬಂದು ಮಿತವಾಗಿ ಊಟಮಾಡಿ ಮನೆ ಯುವರಿಗೆಲ್ಲರಿಗೂ "ನಾನಾಗಿಯೆ ಏಳುವವರೆಗೂ ಎಬ್ಬಿಸಬೇಡಿರೆಂದು" ಹೇಳಿ ಮಲಗಿಕೊಂಡೆನು. ಮಲಗುವುದೊಂದೇತಡ; ಪ್ರತ್ಯಕ್ಷ ಕುಂಭ ಕರ್ಣನನಿದ್ರೆಯೇ ಹತ್ತಿತು. ಒಂದು ದಿವಸವೆಲ್ಲ ನಿದ್ರೆಮಾಡಿದ್ದಾಯಿತು; ನನಗೆ ಎಚ್ಚರವಾಗಲಿಲ್ಲ. ಒಂದೂವರೆದಿವಸವೂ ಆಯಿತು; ನಾನು ಏಳ ಲಿಲ್ಲ. ಆಗ ಮನೆಯುವರಿಗೆ ಅನುಮಾನಕ್ಕಿಟ್ಟಿತು. ಆದರೂ ಇನ್ನೂ ಸ್ವಲ್ಪಹೊತ್ತು ನೋಡೋಣವೆಂದು ಸುಮ್ಮನಿದ್ದರು. ಮಲಗಿ ಎರಡು ದಿನಗಳೂ ಪೂರ್ತಿಯಾದುವು. ನಾನು ಏಳಲೇ ಇಲ್ಲ. ಆಗ ಮನೆಯು ವರಿಗೆ ಸಾಧ್ಯವಿಲ್ಲದೆ, ಬಂದು ನನ್ನನ್ನು ಎಬ್ಬಿಸಿದರು. ನನಗೆ ಮಾತ್ರ ಏಳುವುದಕ್ಕೆ ಮನಸ್ಸಿಲ್ಲ; ಆದರೂ ಎದ್ದದ್ದಾಯಿತು. ನನ್ನನ್ನು ಏಳಿಸಿ ಎಲ್ಲರೂ ಹೊರಕ್ಕೆ ಹೊರಟು ಹೋದರು. ನನ್ನ ಮನಸ್ಸಿನಲ್ಲಿ ಏನೋ ಯೋಚನೆ ತೋರಿತು. ಆಗ ನಾನು ಹೀಗೆ ಯೋಚಿಸಿದೆ:— "ಒಬ್ಬ ಮನುಷ್ಯನು ಈ ಲೋಕದಲ್ಲಿ ಸುಖವಾಗಿ ಜೀವನಮಾಡಬೇಕಾದರೆ ನಿಜ ವಾಗಿಯೂ ಇಷ್ಟು ಕಷ್ಟ ಪಡಬೇಕೇ? ದೇವರು ಅಷ್ಟುಕಷ್ಟಪಟ್ಟಲ್ಲದೆ ಜೀವನವನ್ನೂ ಸುಖವನ್ನೂ ಉಂಟುಮಾಡಲಾರನೇ?" ಎಂದು. ಅಷ್ಟ ರಲ್ಲಿ ಒಂದು ಅಶರೀರವಾಣಿಯು "ಇಲ್ಲ ಇಲ್ಲ, ಇಷ್ಟು ಕಷ್ಟಪಡಬೇಕಾದು ದಿಲ್ಲ" ಎಂದು ಹೇಳಿತು. ಆಗ ನಾನು "ಹಾಗಾದರೆ ನಾನೇಕೆ ಇಷ್ಟು ಕಷ್ಟಪಟ್ಟೆನೆಂದು ಯೋಚಿಸಿದೆ." ಪುನಃ ಅಶರೀರವಾಣಿಯು "ಏನೂ ಇಲ್ಲ; ಅದು ನಿನ್ನ ದುರಾಶೆಯಫಲ"ವೆಂದಿತು. ಆಗ ನಾನು ಏನು "ದುರಾ ಶೆಯೆ?" ನಾನೇನೂ ದುರಾಶೆಪಟ್ಟಂತೆ ಕಾಣಲಿಲ್ಲ. ಎಲ್ಲರೂ "ಇಷ್ಟು ಸಂಬಳವಾದರೆ— ಇಂತಹ ಅಧಿಕಾರವಾದರೆ" ಸುಖಪಡಬಹುದು ಎಂದು ಹೇಳಿದರು. ಅದರಂತೆಯೇ ನಾನೂ ಹಾಗೆ ಹಾಗೆಯೇ ನಡೆದು

ಕೊಂಡೆ. ಇದೆಲ್ಲವೂ ದುರಾಶೆಯೆ? ಅದೇಕೆ? ಎಲ್ಲರೂ "ಅವನು ಸುಖಿ ಇವನು ಸುಖಿ" ಎಂದು ಹೇಳುವರು ಎಂದು ಯೋಚಿಸಿದೆ. ಆಗ ಪುನಃ ಅಶರೀರವಾಣಿಯು "ಅಯ್ಯೋ ಮೂಢ! ಜನರು ಏಕೆ ಹಾಗೆ ಹೇಳುವರೆಂದು ನಿನಗೆ ಗೊತ್ತಾಗಲಿಲ್ಲವೆ? ನಿನ್ನಲ್ಲಿಲ್ಲದೇ ಇರತಕ್ಕ ಯಾವುದೋ ಒಂದೆರಡು ವಿಷಯಗಳು ಅವರಲ್ಲಿರುವಹೊತ್ತಿಗೆ ನೀನು ಅವರನ್ನು ಸುಖಿಗಳೆಂದು ತಿಳಿದುಕೊಂಡೆ. ಅವರು ಅವರಲ್ಲಿಲ್ಲದಿರತಕ್ಕ ಒಂದೆರಡು ವಿಷಯಗಳು ನಿನ್ನಲ್ಲಿರುವಹೊತ್ತಿಗೆ ಅವರು ನಿನ್ನನ್ನು ಸುಖಿಯೆಂದು ತಿಳಿದುಕೊಂಡರು" ಇಷ್ಟೇನೆ. ಒಬ್ಬನು ಹೆಚ್ಚು ಸೌಖ್ಯವಂತನೂ ಮತ್ತೊಬ್ಬನು ಕಡಮೆ ಸೌಖ್ಯವಂತನೂ ಅಲ್ಲ. ಎಲ್ಲರೂ ಒಂದೇ. ಉದಾಹರಣೆಗಾಗಿ ಈಗ ನಿನ್ನನ್ನೇ ನೀನು ಜ್ಞಾಪಿಸಿಕೋ. ನೀನು ಪ್ರೊಫೆಸರನಾಗಿದ್ದಾಗ– ಹೆಚ್ಚು ಸಂಬಳವಿರಲಿಲ್ಲ. ಆಳುಕಾಳುಗಳೂ ವಾಹನಾದಿಗಳೂ ದೊಡ್ಡ ಅಧಿಕಾರ, ಇವೂ ಇರಲಿಲ್ಲ. ಆದರೆ ಇತರ ತಂಟೆ ಯಾವುದೂ ಇರಲಿಲ್ಲ. ಬೇಕಾದಷ್ಟು ಪುರುಸತ್ತೂ, ರಜಾಕಾಲಗಳೂ ಮನೋನೆಮ್ಮದಿಯೂ ಇದ್ದಿತು. ಆಗ್ಗೇನು ಯೋಚನೆಮಾಡಿದೆ? "ಸಬ್‌ಜಡ್ಜಿಯಾದರೆ ಬಹಳ ಅನುಕೂಲ, ಬೇಕಾದಷ್ಟು ಸಂಬಳಬರುವುದು, ಇತರ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಳ್ಳಬಹುದು." ಎಂದು ಯೋಚಿಸಿ ಆ ಕೆಲಸಕ್ಕೆ ಹೋದೆ. ಆ ಕೆಲಸಕ್ಕೆ ಹೋದಾಗ ನಿನಗೆ ಮೇಲೆ ಹೇಳಿದ ಅನುಕೂಲತೆಗಳೆಲ್ಲ ಒದಗಿದುವು. ಆದರೆ ಪುರುಸತ್ತೂ ಮನಸ್ಸಮಾಧಾನವೂ ಇಲ್ಲದೆ ಹೋಯಿತು. ಆಗೇನು ಯೋಚಿಸಿದೆ? "ಏನಿದ್ದರೇನು? ಮನುಷ್ಯನಿಗೆ ಬೇಕಾದದ್ದು ಮನೋನೆಮ್ಮದಿ, ಅದಿಲ್ಲದ ಮೇಲೆ ಏನಿದ್ದರೇನು? ಕಾಲೇಜ್ ಪ್ರೊಪೆಸರನಾಗಿದ್ದಾಗಲೆ ವಾಸಿಯಾಗಿದ್ದಿತು. ತಕ್ಕಷ್ಟು ಸಂಬಳ ಬರುತ್ತಿದ್ದಿತು. ಮನೋನೆಮ್ಮದಿ ಇದ್ದಿತು."..........ಹೀಗೆಲ್ಲವೂ ಯೋಚಿಸಿದೆ. ಹೀಗೆಯೇ ಇತರ ಕೆಲಸಗಳಿಗೂ ಜನಗಳಿಗೂ ಹೋಲಿಸಿಕೊ. ಆಗ ನಿನಗೆ ಎಲ್ಲವೂ ವ್ಯಕ್ತವಾಗುವುದು ಎಂದಿತು. ಆಗ ಪುನಃ ಯೋಚನೆಮಾಡಿದೆ. ನಾನು ಪ್ರತಿಯೊಂದು ಸರ್ಕಾರಿಕೆಲಸದಲ್ಲಿಯೂ ಅನುಭವಿಸಿದ ಕಷ್ಟಸುಖಗಳನ್ನು ಜ್ಞಾಪಿಸಿಕೊಂಡೆ. ಎಲ್ಲವನ್ನೂ ಒಂದರಿಂದೊಂದಕ್ಕೆ ಹೋಲಿಸುತ್ತ ಹಿಂದ ಹಿಂದಕ್ಕೆ ಹೋದೆ. ಹಾಗೆ ಹಿಂದ ಹಿಂದಕ್ಕೆ ಹೋದಹಾಗೆಲ್ಲ ಹಿಂದಿನ ಕೆಲಸಗಳೇ ಒಂದಕ್ಕಿಂತ ಒಂದು ಅನು

ಕೂಲವಾಗಿ ಕಂಡವು. ಆಗ ನನಗೆ ಇದು ನಿಜವಾಗಿಯೂ "ದುರಾಶೆಯ ಫಲ"ವೆಂದೇ ತೋರಿತು. ಮತ್ತು ಇನ್ನು ಈ ಕೆಲಸದಲ್ಲಿರಬಾರದೆಂದೂ ತೋರಿತು. ಪುನಃ ಯೋಚಿಸಿದೆ; ಈಗ ನಾನು ಪುನಃ ಕಾಲೇಜ್ ಪ್ರೊಫೆಸರ್ ಕೆಲಸಕ್ಕೆ ಹೋದರೆ ಸೌಖ್ಯವಿದ್ದರೂ, ಅಗೌರವವೆಂದೂ (ಕಮ್ಮಿಸಂಬಳವಾದುದರಿಂದ) ಸರ್ಕಾರಿಕೆಲಸವನ್ನೆ ಬಿಟ್ಟುಬಿಡಬೇಕೆಂದೂ ಯೋಚನೆಮಾಡಿದೆ. ಇಷ್ಟು ಹೊತ್ತಿಗೆ ನಾನು ನಾಲೆಯ ಕೆಳಗೆ ಅನುಕೂಲವಾದ ಹತ್ತು ಎಕ್ರೆ ಗದ್ದೆಯನ್ನು ತೆಗೆದುಕೊಂಡಿದ್ದೆ; ಅಲ್ಲದೆ ಕೋ-ಆಪರೇಟಿವ್ ಸೊಸೈಟಿಯಲ್ಲಿ (5000) ಐದುಸಾವಿರ ರೂಪಾಯಿಗಳನ್ನೂ ಸೇರಿಸಿದ್ದೆ. ಆದುದರಿಂದ ಈಗ ನನಗಿರುವ ಆಡಂಬರಗಳೆಲ್ಲವನ್ನೂ ಬಿಟ್ಟು, ಬಿಟ್ಟರೆ ಬರುವ ಬತ್ತದಿಂದಲೂ, ಹಣದ ಬಡ್ಡಿಯಿಂದಲೂ ಯಾವ ತೊಂದರೆಯೂ ಇಲ್ಲದೆ ಜೀವನಮಾಡಬಹುದೆಂದು ತೋರಿತು.

ಇಷ್ಟುಹೊತ್ತಿಗೆ ಸಾಯಂಕಾಲವಾಗುತ್ತಾ ಬಂದಿತು. ಮನೆಯವರೆಲ್ಲರೂ ಪುನಃ ನನ್ನನ್ನು ನೋಡುವುದಕ್ಕೆ ಬಂದರು. ಆಗ ನಾನು ಮೇಲೆ ಹೇಳಿದಂತೆ ಕೆಲಸವನ್ನು ಬಿಟ್ಟು ಬಿಡುತ್ತೇನೆಂದು ಹೇಳಿದೆ. ಅವರು ಬೇಡವೆಂದರು. ನಾನು "ನನಗೆ ಎಷ್ಟು ಸಂಪಾದನೆ ಇದ್ದರೂ ಸುಖವಿಲ್ಲ" ದಿರುವುದರಿಂದ, ಆ ಹಣ ಅಥವಾ ಕೆಲಸದಿಂದ ಪ್ರಯೋಜನವೇನೆಂದು ಕೇಳಿದೆ. ಅದಕ್ಕವರು ಹಾಗೆಂದರೇನು? ಹಣವಿದ್ದರೆ ನಾಲ್ಕುಜನಗಳಿಗೆ ಅನ್ನಹಾಕಬಹುದು; ದಾನಧರ್ಮಗಳನ್ನುಮಾಡಬಹುದು; ಬೇಕಾದ ಊಟ ಉಡಿಗೆಗಳನ್ನುಮಾಡಬಹುದು; ಹೆಂಡತಿಮಕ್ಕಳಿಗೆ ಬೇಕಾದ ಒಡವೆ ವಸ್ತುಗಳನ್ನುಮಾಡಿಸಬಹುದು. ...... ಎಷ್ಟೋ ಅನುಕೂಲವುಂಟು ಎಂದು ಹೇಳಿದರು.

ಅಷ್ಟು ಹೊತ್ತಿಗೆ ಸರಿಯಾಗಿ ನನ್ನ ಹೆಂಡತಿಯು ಐನೂರು ರೂಪಾಯಿನ ಪೀತಾಂಬರವನ್ನುಟ್ಟು ಮೈ ಮೇಲೆ ಚಿನ್ನ ಬೆಳ್ಳಿ ವಜ್ರದ ಐದಾರು ಸಾವಿರ ರೂಪಾಯಿಬಾಳತಕ್ಕ ಆಭರಣಗಳನ್ನು ಹಾಕಿಕೊಂಡು ಎದುರಿಗೆ ನಿಂತಳು. ನನ್ನ ಮಕ್ಕಳೆಲ್ಲ ಒಳ್ಳೊಳ್ಳೆ ಬಟ್ಟೆಗಳನ್ನೂ ಆಭರಣಗಳನ್ನೂ ಹಾಕಿಕೊಂಡು ನನ್ನ ಅಕ್ಕಪಕ್ಕಗಳಲ್ಲಿ ನಿಂತುಕೊಂಡರು. ಆ ವೇಳೆಗೆ ಸರಿಯಾಗಿ ಮನೆಯಲ್ಲಿರತಕ್ಕ ಎಲೆಕ್ಟ್ರಿಸಿಟಿ ದೀಪಗಳೆಲ್ಲವೂ ಹತ್ತಿಕೊಂಡವು.

ಮನೆಯೆಲ್ಲವೂ ಬೆಳದಿಂಗಳು ಹರಡಿಕೊಂಡಹಾಗಾಯಿತು. ವಾಚಕರೆ! ಆ ದೃಶ್ಯವನ್ನು (ನೋಟ) ಏನೆಂದು ಹೇಳುವಿರಿ? ಮೊದಲೆ ಮನೆಯಲ್ಲೆಲ್ಲಾ ಬೆಳದಿಂಗಳು ಚೆಲ್ಲಿದಹಾಗೆ ಬೆಳಕು; ಮುಂದಗಡೆ ಸೌಂದರ್ಯವತಿಯಾದ ಹೆಂಡತಿ; ಸುತ್ತಲೂ ಮಕ್ಕಳು; ಮೊದಲೇ ನನ್ನ ಹೆಂಡತಿ ಸುರೂಪಿ; ಜತೆಗೆ ಬೇಕಾದಷ್ಟು ಆಭರಣಗಳು; ಇವುಗಳ ಜತೆಗೆ ದೀಪದ ಬೆಳಕು. ಇವಿಷ್ಟೂ ಸೇರಿ ನನ್ನನ್ನು ಅಂಧನನ್ನಾಗಿಮಾಡಿ ಬಿಟ್ಟವು! ಆಹಾ! ನನ ಗಿಂತಲೂ ಸೌಖ್ಯವಂತರು ಮತ್ತೊಬ್ಬರುಂಟೇ ಎನಿಸಿತು.— ನಿಜವಾಗಿಯೂ ಇದೇ ಸ್ವರ್ಗಸುಖವೆಂದು ತೋರಿತು. ಪುನಃ ಮೋಹವು ಕವಿಯಿತು. ಈ ಕೆಲಸವಿರುವ ಹೊತ್ತಿಗಲ್ಲವೆ ಈ ರೀತಿಯಾದ ಸಂತೋಷ? ಅದಿಲ್ಲದಿದ್ದರೆ ಇದೆಲ್ಲಿದ್ದಿತು? ಆದುದರಿಂದ ಕೆಲಸವನ್ನು ಬಿಡಬಾರದೆಂದೇ ತೋರಿತು.

ಆಗ ಪುನಃ ಅಶರೀರವಾಣಿಯು ಅಯ್ಯೋ! ಮುಟ್ಠಾಳ!! "ರಾತ್ರಿ ಕಂಡ ಬಾವಿಯಲ್ಲಿ ಹಗಲುಬಿದ್ದಹಾಗಾಯಿತಲ್ಲೋ? ಇಷ್ಟು ಹೊತ್ತೂ ಏನೇನೋ ಯೋಚಿಸಿ ಈಗ ಪುನಃ ಸಿಕ್ಕಿಬೀಳುವೆಯಲ್ಲೊ! ಎಂದಹಾಗಾಯಿತು. ಆಗ ಪುನಃ ಯೋಚನೆಮಾಡಿದೆ. ನಿಜ; ಮೇಲೆ ಹೇಳಿದಅನುಕೂಲಗಳು ಇರುವುದು ನಿಶ್ಚಯ; ಇದ್ದರೆ ನನಗೇನು? ಇತರರಿಗಲ್ಲವೊ? ಹೌದು! ಇಂತಹ ಹೆಂಡತಿಯೊಡನೆಯೂ ಮಕ್ಕಳೊಡನೆಯೂ ಮನಸ್ಸಮಾಧಾನದಿಂದ ಯಾವ ಯೋಚನೆಯೂ ಇಲ್ಲದೆ ನಾಲ್ಕುದಿನಗಳಾದರೂ ನೆಟ್ಟಗಿರಲಿಲ್ಲ. ಬಂಧುಗಳೊಡನೆ ಸೇರಿ ಒಂದುದಿನವಾದರೂ ಊಟಮಾಡಲಿಲ್ಲ. ಸ್ನೇಹಿತರೊಡನೆ ಸೇರಿಕೊಂಡು ಒಂದುದಿವಸವಾದರೂ ಉಲ್ಲಾಸವಾಗಿ ಕಾಲಕಳೆಯಲಿಲ್ಲ. ಹೀಗೆ ಅಸಲಿಗೆ ಮೋಸವಾದಂತೆ, ಕಷ್ಟಪಡುವ ನನಗೇ ಯಾವ ಸೌಖ್ಯವೂ ಇಲ್ಲದ ಮೇಲೆ, ಬಾಕಿಯವರಿಗೆ ಇದ್ದರೇನು? ಇಲ್ಲದಿದ್ದರೇನು? ಎಂದು ಯೋಚಿಸಿ ಪುನಃ ಹಿಂದಿನಂತೆ ಕೆಲಸ ಬಿಡುವುದೇ ಸರಿಯೆಂದು ಬಾಯಿಬಿಟ್ಟು ಹೇಳಿದೆ. ಒಡನೆಯೆ ನನ್ನ ಹೆಂಡತಿಯು ಏನೇನೋ ಇಲ್ಲದಸಲ್ಲದ ಥಳುಕುಗಳನ್ನುಮಾಡುತ್ತ ಹಾಗುಂಟೆ ಹೀಗುಂಟೆ ಎಂದು ನನ್ನನ್ನು ಮರುಳುಮಾಡುವುದಕ್ಕೆ ಒಂದಳು. ಅದರಂತೆಯೇ ನನ್ನ ಮನಸ್ಸೂ ಸ್ವಲ್ಪ ಆಕಡೆಗೇನೇ ಎಳೆಯಿತು. ಪುನಃ

ಯೋಚನೆಮಾಡಿ ಖಂಡಿತವಾಗಿಯೂ ಕೆಲಸದಲ್ಲಿರುವುದಿಲ್ಲವೆಂತಲೂ, ಹಿಂದೆ ಹೇಳಿದಂತೆ ಇರುವ ಹಣದಿಂದಲೂ ಭೂಮಿಯಿಂದಲೂ ಮುಂದಿನ ಜೀವನವನ್ನು ನಿರ್ವಹಿಸುವುದೇ ಸರಿಯೆಂದು ನಿಷ್ಕರ್ಷೆಮಾಡಿದೆ. ಆಗ ಎಲ್ಲರೂ ಒಟ್ಟಿಗೇ ಹೇಳುವುದಕ್ಕೆ ಬಂದರು. ನನಗೆ ಬೇಜಾರಾಯಿತು. ಕೂಡಲೇ ಇವರೆಲ್ಲರನ್ನೂ ಬಿಟ್ಟುಬಿಟ್ಟು ಹೇಳದೆಕೇಳದೆ ಎಲ್ಲಿಗಾದರೂ ಹೋಗಬೇಕು ಅಥವಾ ಸನ್ಯಾಸವನ್ನು ತೆಗೆದುಕೊಳ್ಳಬೇಕೆಂದು ತೋರಿತು.



## ಅಧ್ಯಾಯ ೭

ಅಷ್ಟುಹೊತ್ತಿಗೆ ಸರಿಯಾಗಿ ಮದರಾಸಿನಿಂದ "ಜನೋಪಕಾರಿ" ಎಂಬ ತಮಿಳುಮಾಸಪತ್ರಿಕೆಯು ಕೈಗೆ ಬಂದಿತು. ಅದರ ಹಾಳೆಯನ್ನು ತಿರುವಿ ಹಾಕಲು ಮೊದಲಿನ ಪುಟದಲ್ಲಿ "ಸತ್ಯಸನ್ಯಾಸ" ವೆಂಬ ಲೇಖನವಿತ್ತು. ಅದರಲ್ಲಿ ಆರಂಭದಲ್ಲೇ ಹೀಗೆ ಬರೆದಿತ್ತು.— ಅಯ್ಯಾ ಮನುಷ್ಯನೆ! ನಿನ್ನ ಮನಸ್ಸನ್ನು ನಿನ್ನ ಸ್ವಾಧೀನದಲ್ಲಿಟ್ಟುಕೊಳ್ಳದಿದ್ದರೆ ನಿನಗೆಂದಿಗೂ ಸೌಖ್ಯವಾಗುವಹಾಗಿಲ್ಲ; ಏನುಮಾಡಿದರೂ ಉಪಯೋಗವಿಲ್ಲ; ನಿನ್ನ ಮನಸ್ಸನ್ನು ನಿನ್ನ ಸ್ವಾಧೀನದಲ್ಲಿಕೊಳ್ಳದೆ, ನೀನು ಸನ್ಯಾಸವನ್ನು ತೆಗೆದುಕೊಂಡರೂ, ಊರಿನಲ್ಲಿದ್ದರೂ, ಕಾಡಿನಲ್ಲಿದ್ದರೂ, ಒಬ್ಬಂಟಿಗನಾಗಿದ್ದರೂ, ಸಂಸಾರ ಸಮೇತನಾಗಿದ್ದರೂ, ಹೇಗಿದ್ದರೂ ಸರಿಯೆ; ಸುಖವೆಂದಿಗೂ ಆಗುವುದಿಲ್ಲ. ಆದುದರಿಂದ ನಿನ್ನ ಮನಸ್ಸನ್ನು ಇನ್ನೊಬ್ಬರ ಅಧೀನಮಾಡದೆ ನಿನ್ನ ಸ್ವಾಧೀನದಲ್ಲೇ ಇಟ್ಟುಕೊಂಡೆಯಾದರೆ ಆಗ ನಿನಗೆ ಯಾವ ತೊಂದರೆಯೂ ಆಗುವುದಿಲ್ಲ. ಹೆಂಡತಿ ಮಕ್ಕಳಾಗಲಿ ಇತರರೇ ಆಗಲಿ ಯಾರು ಯಾರು ಎಷ್ಟು ಅಂದರೂ ನಿನ್ನ ಮನಸ್ಸನ್ನು ಸ್ಥಿರವಾಗಿಟ್ಟುಕೊಂಡಿದ್ದರೆ ನಿನಗೇನು ಬೇಜಾರಾಗುವುದಿಲ್ಲ. ದ್ರವ್ಯವಿರಲಿ, ಇಲ್ಲದಿರಲಿ; ಬಾಂಧವ್ಯವಿರಲಿ, ಇಲ್ಲದಿರಲಿ; ಹೆಂಡತಿಮಕ್ಕಳಿರಲಿ, ಇಲ್ಲದಿರಲಿ; ನಿನಗೆ ಒಂದೇ ಸಮನಾದ ಸುಖವುಂಟಾಗುವುದು. ಹಾಗಲ್ಲದೆ, ನೀನು ನಿನ್ನ ಮನಸ್ಸನ್ನು ಬಿಗಿಹಿಡಿಯುವುದಕ್ಕೆ ಶಕ್ತಿಇಲ್ಲದೆ– ಊರುಬಿಟ್ಟಮಾತ್ರಕ್ಕೆ– ಕಾಡಿಗೆಹೋದಮಾತ್ರಕ್ಕೆ– ಹೆಂಡತಿಮಕ್ಕಳನ್ನು ತ್ಯಾಗಮಾಡಿದಮಾತ್ರಕ್ಕೆ– ನಿನಗೆ ಸುಖವಾಗುವುದೆಂದು ಯೋಚಿಸಬೇಡ.

ನಿಜವಾಗಿಯೂ ನೀನು ಸುಖವಾಗಿರಬೇಕೆಂದು ಅಪೇಕ್ಷಿಸಿದರೆ ದುರಾಶೆಯನ್ನು ಬಿಟ್ಟು ಇದ್ದುದರಲ್ಲಿ ತೃಪ್ತನಾಗಿ, ಇನ್ನೊಬ್ಬರಮಾತಿಗೆ ಮನಸೋಲದೆ, ನಿನ್ನ ಮನಸ್ಸನ್ನು ನಿನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದರೆ ನಿನಗೆ ಸುಖವಾದೀತು. ಇಲ್ಲದಿದ್ದರೆ ಯಾವಾಗ್ಯೂ ದುಃಖಪಟ್ಟು ಸಾಯುವುದೇ ಸರಿ. ಮೇಲೆ ಹೇಳಿದಂತೆ ಮನಸ್ವಾಧೀನವಿಲ್ಲದವನು ಕಾಡಿಗೆ ಹೋದರೂ ಉಪಯೋಗವಿಲ್ಲವೆಂಬುವ ವಿಷಯದಲ್ಲಿ ಒಂದು ಪೂರ್ವಿಕವಾದ ಇತಿಹಾಸವುಂಟು, ಅದನ್ನು ಹೇಳುತ್ತೇನೆ; ಕೇಳು.—

## —: ಸತ್ಯಸನ್ಯಾಸ :—

ನಮ್ಮ ಭರತಖಂಡದ ಇತಿಹಾಸ ಪುರಾಣಗಳಲ್ಲಿ ಯಮುನಾ ನದಿಗೆ ಇರುವಷ್ಟು ಮಾಹಾತ್ಮ್ಯವೂ ಪ್ರಭಾವವೂ, ಪ್ರಪಂಚದಲ್ಲಿರತಕ್ಕ ಮತ್ತಾವ ನದಿಗೂ ಇರುವುದಿಲ್ಲ. ಕರ್ಣಪರಂಪರೆಯಾಗಿಯೂ ಇತಿಹಾಸಪುರಾಣಗಳ ಮೂಲಕವೂ ಹೇಳಲ್ಪಡುವ ಕಥೆಗಳಲ್ಲಿ ಶ್ರೀಕೃಷ್ಣಮೂರ್ತಿಯ ಆಟಪಾಟಗಳೂ, ಬಾಲ್ಯಚೇಷ್ಟೆಗಳೂ, ಮಹತ್ತಾದಕೆಲಸಗಳೂ ನಮ್ಮ ಸ್ಮರಣೆಗೆಬರುವಾಗ, ಸ್ವಾಭಾವಿಕವಾಗಿಯೆ ನಮಗೆ ತಿಳಿಯದಹಾಗೆಯೆ, ಯಮುನೆಯ ಹೆಸರು ನಮ್ಮ ಸ್ಮರಣೆಗೆ ಬರುವುದು. ಶ್ರೀಕೃಷ್ಣ ಪರಮಾತ್ಮನ ಸಂಬಂಧವನ್ನುಹೊಂದಿದ ಭಾಗ್ಯದಿಂದಲೆ ಯಮುನೆಗೆ ವಿಶೇಷವಾದ ಒಂದು ಪಾರಿಶುಧ್ಯವೂ ಮಹಾತ್ಮ್ಯವೂ ಉಂಟಾಗಿರುವುದು.

ಮೋಸಮಾಡುವ ಯೋಚನೆಯೂ ಹಾಳುಮಾಡುವ ಅಭಿಪ್ರಾಯವೂ ಯಾವುದೂ ಸ್ವಲ್ಪವೂ ಇಲ್ಲದೆ, ಕಳಂಕವಿಲ್ಲದ ಮನಸ್ಸಿನಿಂದ ಉಲ್ಲಾಸದಿಂದ ಸುಖಜೀವನಮಾಡುವ ಸತ್ಪುರುಷರನ್ನು, ವಶೀಕರಿಸುವ ರೀತಿಯಲ್ಲಿ ಒಂದುದಿವಸ ಸಾಯಂಕಾಲ ಸೂರ್ಯನು ಸ್ವರ್ಣಮಯನಾಗಿ ಜ್ವಲಿಸುತ್ತಿದ್ದನು. ನೋಡತಕ್ಕವರ ಮನಸ್ಸನ್ನು ಆಕರ್ಷಿಸುವಹಾಗೆ ಯಮುನೆಯಲ್ಲಿ ಜಲಪ್ರವಾಹವು ಬಹು ಸೊಗಸಾಗಿಯೂ ಗಂಭೀರವಾಗಿಯೂ ಹರಿಯುತ್ತಿತ್ತು, ನದಿಯತೀರದಲ್ಲಿ ಬೆಳ್ಳಿಯಂತೆ ಪ್ರಕಾಶಿಸುವ ಮರಳಿನ ಮೇಲೆ ಶ್ರೀಕೃಷ್ಣನೂ ಸತ್ಯಭಾಮೆಯೂ, ಬಹುಮನೋರಮ್ಯವಾಗಿ ಅಧಿಕಸಂತೋಷದೊಡನೆ ಸಂಭಾಷಿಸುತ್ತಲೂ ತಮಾಷಿ

ಯಾಗಿ ಆಟವಾಡಿಕೊಂಡು ಬಹು ಕುತೂಹಲದಿಂದ ಕಾಲಕಳೆಯುತ್ತಿದ್ದರು. ಸುವಾಸನೆಯಿಂದಕೂಡಿದ ತಂಪಾದ ಮಂದಮಾರುತವು ಅವರುಗಳ ಆನಂದವನ್ನು ಇನ್ನೂ ಹೆಚ್ಚುಮಾಡಿತು. ಆ ವೇಳೆಯಲ್ಲಿ ಮಧುರವಾದ ಕಂಠದಿಂದ ಹೇಳಲ್ಪಟ್ಟ ವೇದಘೋಷವು ನಮ್ಮ ಸತ್ಯಭಾಮೆಯ ಕಿವಿಯಲ್ಲಿ ಬೀಳುತ್ತಲೆ, ಅವಳು ಬಹು ಆಶ್ಚರ್ಯದಿಂದ, ಅದರಲ್ಲಿ ಹೆಚ್ಚಾದ ಗಮನವಿಟ್ಟು ಕಿವಿಗೊಟ್ಟುಕೇಳಿ, ಆ ವೇದಘೋಷವನ್ನು ಕೊಂಚಹೊತ್ತು ಹಾಗೆಯೇ ಕೇಳಿ, ಆ ಮೇಲೆ ತನ್ನ ಪತಿಯನ್ನು ನೋಡಿ "ಸಕಲ ವಿಷಯಗಳನ್ನೂ ತಿಳಿದ ಮಹಾಪ್ರಭೋ! ದೇವಲೋಕದ ವೀಣಾಗಾನದಹಾಗಿರತಕ್ಕ ಈ ಅದ್ಭುತವಾದ ಸಂಗೀತ (ವೇದಘೋಷ)ವು ಎಲ್ಲಿಂದ ಕೇಳಬರುತ್ತಿದೆ? ಯಾರು ಹಾಡುವವರು? ಎಂದು ಕೇಳಿದಳು. ಅದಕ್ಕೆ ಶ್ರೀಕೃಷ್ಣನು, ಪ್ರಿಯಸುಂದರಿ! ಪಕ್ಕದಲ್ಲಿರುವ ಕಾಡಿನಲ್ಲಿ, ಸೊಗಸಾದ ಪರ್ಣಶಾಲೆಯಲ್ಲಿ ಒಬ್ಬ ಸನ್ಯಾಸಿ ವಾಸಮಾಡುತ್ತಿರುವನು. ಅವನು ಅಲ್ಲಿ ತಪಸ್ಸುಮಾಡುತ್ತಿರುವನು. ಈಗ ನೀನು ಕೇಳಿ ಸಂತೋಷಪಟ್ಟ ವೇದಸಂಗೀತವು ಅವನದೇ ಆಗಿರಬೇಕು ಎಂದನು. ಅದನ್ನು ಕೇಳಿ ಸತ್ಯಭಾಮೆಯು ಪ್ರಾಣೇಶಾ! ಪರಂಧಾಮಾ! ಸರ್ವಸಂಗಪರಿತ್ಯಾಗವನ್ನುಮಾಡಿ, ಸಂಸಾರಬಾಧೆಯಿಂದ ತಪ್ಪಿಸಿಕೊಂಡು, ಭಯಂಕರವಾದ ಅರಣ್ಯದಲ್ಲಿ ಒಬ್ಬರೇ ಇದ್ದುಕೊಂಡು, ಕಠಿಣತಪಸ್ಸನ್ನುಮಾಡತಕ್ಕ ಶಾಂತಮೂರ್ತಿಗಳಾದ ಸನ್ಯಾಸಿಗಳ ಬಾಳುವಿಕೆಯೇ ಬಾಳಿಕೆ! ಅವರುಗಳೇ ಮನುಷ್ಯರಲ್ಲಿ ಉತ್ತಮರಾದವರು. ನಿಷ್ಕಳಂಕರಾಗಿ ಮಹಾಪುಣ್ಯಶಾಲಿಗಳಾದ ಅವರುಗಳಿಗಲ್ಲವೋ ಮೋಕ್ಷವು ಸೇರಿದ್ದು. ಹೆಂಡತಿಮಕ್ಕಳಮಧ್ಯೆಯಿದ್ದುಕೊಂಡು ಸರ್ವಪಾಪಗಳಿಗೂ ಕಾರಣಭೂತರಾಗಿರುವ ಸಂಸಾರಿಗಳಿಗೆ ಮೋಕ್ಷವು ಹೇಗೆ ಸಿದ್ಧಿಸುವುದು? ಕಾಷಾಯವಸ್ತ್ರವನ್ನುಧರಿಸಿ, ಮಹಾಸೌಂದರ್ಯವುಳ್ಳ ಕಾಡಿನಲ್ಲಿ ವಾಸಮಾಡಿ, ಸದಾಭಗವನ್ನಾಮ ಸಂಕೀರ್ತನವನ್ನುಮಾಡುವ ಉತ್ತಮಸನ್ಯಾಸಿಗಳೇ ಮಹಾಮಹಿಮೆಯನ್ನು ಹೊಂದಿದವರು. ಅವರುಗಳೇ ಪರಿಶುದ್ಧರು. ಅವರುಗಳೇ ಸ್ತೋತ್ರಕ್ಕೂ ಪೂಜ್ಯತೆಗೂ ಅರ್ಹರು. ಆದುದರಿಂದ, ಪ್ರಾಣಪತಿಯೆ! ಬಹಳ ಮನೋನೆಮ್ಮದಿಯೊಡನೆ ಕೊಂಚವೂ ಕ್ಲೇಶವಿಲ್ಲದೆ ಉಪನಿಷತ್ ವಾಕ್ಯಗಳನ್ನು ಹೇಳುತ್ತಾ ಸಂತೋಷದಿಂದಿರುವ ವಿರಕ್ತ

ರಲ್ಲಿಗೆ ಹೋಗಿ ಅವರ ದರ್ಶನಮಾಡಿಕೊಂಡು ಬರೋಣವೆಂದು ನನಗೆ ಅಪೇಕ್ಷೆಯಾಗಿದೆ; ಎಂದು ಶ್ರೀಕೃಷ್ಣನನ್ನು ಆಲಿಂಗಿಸಿ, ಮಧುರವಾದ ಮಾತು (ಅಮೃತವಾಕ್ಯ) ಗಳಿಂದ ಹೇಳಿದಳು.

ಸರ್ವಾಂತರ್ಯಾಮಿಯಾಗಿಯೂ, ಸರ್ವಜ್ಞನಾಗಿಯೂ ಇರುವ ಶ್ರೀಕೃಷ್ಣನು ಸತ್ಯಭಾಮೆಯ ಕೈಗಳನ್ನು ಹಿಡಿದುಕೊಂಡು "ಹೃದಯೇಶ್ವರಿ! ನಿನ್ನ ಅಭಿಪ್ರಾಯವೇ ನನ್ನ ಅಭಿಪ್ರಾಯವು. ನಿನ್ನ ಇಷ್ಟವನ್ನು ನೆರವೇರಿಸುವುದಕ್ಕಿಂತಲೂ ಬೇರೆ ಕೆಲಸವು ನನಗೆ ಇನ್ನೇನಿರುವುದು? ನಿನ್ನ ಇಷ್ಟದಂತೆಯೇ ನಾವು ಈಗ ಆ ತಪಸ್ವಿಯ ಹತ್ತಿರಕ್ಕೆ ಹೋಗೋಣ. ನಾನು ಒಬ್ಬ ಮುದಿ ಬೇಡನ ವೇಷವನ್ನು ತಾಳುತ್ತೇನೆ. ನೀನು ಈಗಿರುವ ಹಾಗೆಯೇ ಸೌಂದರ್ಯವತಿಯಾಗಿರು. ನಾವೀರ್ವರೂ ಆ ಸನ್ಯಾಸಿಯ ಸಮೀಪಕ್ಕೆ ಹೋಗಿ ಈ ರಾತ್ರಿ ಅವರಪರ್ಣಶಾಲೆಯಲ್ಲಿ ಇರಲು ಅನುಮತಿಯನ್ನು ಕೇಳೋಣ. ನಾನು ಅವರಲ್ಲಿ ಏನನ್ನಾದರೂ ಕೇಳಿಕೊಂಡಿರುವ ಕಾಲದಲ್ಲಿ, ನೀನು ಮಾತ್ರ ನಗದೆಯೂ, ಮಾತನಾಡದೆಯೂ ಇರಬೇಕು. ಅದರಮೇಲೆ ನಡೆಯುವ ಸಂಭವಗಳನ್ನು ಗಮನಿಸುತ್ತಿರು." ಎಂದುಹೇಳಿ ಸರ್ವಶಕ್ತನಾದ ಶ್ರೀಕೃಷ್ಣನು ಎಲ್ಲರೂ ಭ್ರಮಿಸುವಹಾಗೆ ಸ್ವಾಭಾವಿಕವಾದ ಒಬ್ಬ ಮುದಿ ಬೇಡನಾಗ ಆಗಿ ಬಿಟ್ಟನು. ನೆರೆತ ಕೂದಲೂ, ಗೂನು ಬೆನ್ನೂ, ಎಲುಬುಗಳು ಎದ್ದಿರುವ ದೇಹವೂ, ಕೃಶವಾದಶರೀರವೂ ಉಳ್ಳವನಾಗಿ, ಕೈಯಲ್ಲಿ ಬಿಲ್ಲು ಬತ್ತಳಿಕೆಗಳನ್ನು ಧರಿಸಿದವನಾಗಿ, ಕಪಟನಾಟಕ ಸೂತ್ರಧಾರಿಯಾದ ಶ್ರೀಕೃಷ್ಣನು ಸತ್ಯಭಾಮೆಯೊಡನೆ ಹೊರಟುಹೋದನು.

ಯಮುನಾನದಿಯ ದಡದಲ್ಲಿ ಸಕಲ ಸೌಂದರ್ಯದಿಂದಕೂಡಿ, ಜನಸಂಚಾರವಿಲ್ಲದ ಒಂದು ಸ್ಥಳದಲ್ಲಿ ನಮ್ಮ ತಪಸ್ವಿಯ ಪರ್ಣಶಾಲೆ ಇತ್ತು. ತಪಸ್ವಿಯ ವಾಸಸ್ಥಾನಕ್ಕೆ ಇದಿರಿನಲ್ಲಿ ಇದ್ದ ಒಳ್ಳೇ ಮರಗಳಿಗೂ, ಉತ್ತಮವಾದ ಹೂವಿನ ಗಿಡಗಳಿಗೂ ಮಧ್ಯದಲ್ಲಿ ಹಲವುವಿಧದ ಹುಲ್ಲೇಕರುಗಳೂ, ಹಂಸಪಕ್ಷಿಗಳೂ ಆಟವಾಡುತ್ತಿದ್ದುವು. ದೇವಸ್ವರೂಪಿಗಳಾದ ನಮ್ಮ ಯಾದವ ದಂಪತಿಗಳು ಸನ್ಯಾಸಿಯ ಆಶ್ರಮಕ್ಕೆ ಹೋಗುವ ಸಮಯದಲ್ಲಿ ಪೂರ್ಣಚಂದ್ರನು ಮಹಾಗಂಭೀರದೊಡನೆ ಉದಯವಾದನು. ಆಶ್ರಮದ ಬಾಗಿಲಲ್ಲಿದ್ದ ಕರೇಬಂಡೆಯಿಂದಾದ ಸೊಗಸಾದ ಆಸನದಲ್ಲಿ ಅರಿಸಿನ ಬಣ್ಣದ

ವಸ್ತ್ರವನ್ನುಟ್ಟುಕೊಂಡು, ಶಾಂತ ಮನಸ್ಸಿನಿಂದ ಬೇಡನಾದ ಕೃಷ್ಣನೂ, ಸ್ತ್ರೀನಾಯಕಿಯಾದ ಸತ್ಯಭಾಮೆಯೂ ಬಹಳ ವಿನಯದಿಂದಲೂ, ಮತ್ತೂ ನಮ್ರತೆಯಿಂದಲೂ ಸಾಷ್ಟಾಂಗನಮಸ್ಕಾರ ಮಾಡಿದರು. ಸನ್ಯಾಸಿಯು ಅವರನ್ನು ಆಶೀರ್ವದಿಸಿ ಅವರನ್ನು ಆಸನದಲ್ಲಿ ಕೂರುವಂತೆಹೇಳಿ, ನೀವು ಯಾರು, ಎಲ್ಲಿಂದ ಬಂದಿರಿ, ಎಲ್ಲಿಗೆ ಹೋಗಬೇಕು, ನಿಮ್ಮ ವಾಸಸ್ಥಳ ವಾವುದು? ಎಂದು ಪ್ರೀತಿಯಿಂದ ಕೇಳಿದರು. ಅದಕ್ಕೆ ಕೃಷ್ಣಬೇಡನು ಹೀಗೆ ಹೇಳಿದನು:— "ಎಲೈ ಶಾಂತಸ್ವರೂಪನೇ, ಯೋಗೀಂದ್ರಾ, ಪರಿಶುದ್ಧಮೂರ್ತಿಯೇ! ಇದೋ, ಇಲ್ಲಿ ತೇಜಸ್ವಿಯಾಗಿ ನಿಂತಿರುವ ಈ ಸೌಂದರ್ಯವತಿಯು ಈ ರಾಜ್ಯದ ಅರಸನ ಪ್ರೀತಿಪಾತ್ರಳಾದ ಪುತ್ರಿಯು. ಇವಳ ತಂದೆಯು ತನ್ನ ಸೇನೆಗಳೊಡನೆ ಇವಳನ್ನು ಕರೆದುಕೊಂಡು ಈ ಅರಣ್ಯಕ್ಕೆ ಬೇಟೆಯಾಡುವುದಕ್ಕೆ ಬಂದರು, ಬೇಟೆ ಮುಂದಾಗುತ್ತಾ ಇರುವಾಗ ಕಾಡಾನೆಗಳು ಅವರುಗಳ ಮೇಲೆ ನುಗ್ಗಿ ಅಟ್ಟಿಸಿಕೊಂಡು ಬಂದು ಅವರುಗಳನ್ನ ಬೇರೆಬೇರೆಯಾಗುವಂತೆ ಚದರಿಸಿ ಓಡಿಸಿಬಿಟ್ಟುವು. ತಂದೆಯನ್ನು ಅಗಲಿದ ದುಃಖದಿಂದ ಎಲ್ಲಿಗೆ ಹೋಗಬೇಕೆಂದು ತಿಳಿಯದೆ ಇವಳು ಅಳೆದುಕೊಂಡಿರುವ ವೇಳೆಯಲ್ಲಿ, ಅಕಸ್ಮಾತ್ತಾಗಿ ಕ್ರೂರವಾದ ಒಂದು ಹುಲಿಯು ಇವಳನ್ನು ನೋಡಿಬಿಟ್ಟು ಹೆಚ್ಚು ಆವೇಶದಿಂದ ಓಡಿಸಿಕೊಂಡು ಬಂದಿತು. ಅದನ್ನು ಕೊಂಚ ದೂರದಲ್ಲಿದ್ದು ನೋಡಿದ ನಾನು ಒಡನೆಯೆ ನನ್ನ ಬಿಲ್ಲಿನಿಂದ ಒಂದು ಕ್ರೂರವಾದ ಬಾಣವನ್ನು ಬಿಟ್ಟು ಆ ಹುಲಿಯನ್ನು ಕೊಂದೆನು. ಆಮೇಲೆ ಮಹಾವ್ಯಸನಕರವಾದ ಇವಳ ಚರಿತ್ರೆಯೆಲ್ಲವನ್ನೂ ಕೇಳಿ ನಾನು ಬಹಳಪರಿತಾಪಗೊಂಡವನಾಗಿ, ಇವಳನ್ನು ಹೇಗಾದರೂ ಇವಳ ತಂದೆಯ ಹತ್ತಿರಕ್ಕೆ ಸೇರಿಸಬೇಕೆಂದು ತೀರ್ಮಾನಿಸಿ, ಇವಳೊಡನೆ ಈದಿವಸ ಸಾಯಂಕಾಲವೆಲ್ಲಾ ರಾಜನ ಪಟ್ಟಣಕ್ಕೆ ಹೋಗುವ ದಾರಿಯನ್ನು ಹುಡುಕಿದೆನು. ಅದು ಇನ್ನೂ ಗೊತ್ತಾಗಲಿಲ್ಲ. ಸೂರ್ಯನು ಅಸ್ತನಾಗಿ ಬಿಟ್ಟನು. ರಾತ್ರಿಕಾಲವು ಬಂದುಬಿಟ್ಟಿತು; ಕ್ರೂರವಾದ ಜಂತುಗಳೂ, ಕೊಲೆಪಾತಕರಾದ ಕಳ್ಳರೂ ಇರುವ ಈ ಕಾಡಿನಲ್ಲಿ ಒಬ್ಬನೇ ಇರಲು ಭಯಪಟ್ಟು ತಮ್ಮ ಆಶ್ರಮದಲ್ಲಿ ರಾತ್ರಿಯನ್ನು ಕಳೆಯೋಣವೆಂದು ಇಲ್ಲಿಗೆ ಬಂದೆವು. ಮಹಾಪುಣ್ಯಮೂರ್ತಿಯಾಗಿಯೂ, ಸಕಲವನ್ನೂ ಬಿಟ್ಟು ಸನ್ಯಾಸಿಯಾಗಿಯೂ ಇರುವ ತಮ್ಮ ವಾಸಸ್ಥಳದಲ್ಲಿ ಈ ಯುವತಿಯು ಇದ್ದರೆ

ನನಗೆ ಒಂದು ವಿಧವಾದ ಯೋಚನೆಯೂ ಇಲ್ಲ. ಆದುದರಿಂದ, ಋಷೀಶ್ವರಾ! ನಾವುಗಳು ಈ ರಾತ್ರಿಯನ್ನು ಇಲ್ಲಿ ಕಳೆಯುವುದರಲ್ಲಿ ತಮಗೆ ಯಾವದೊಂದು ಆಕ್ಷೇಪಣೆಯೂ ಇಲ್ಲವೆಂತಲೇ ನಾನು ಯೋಚಿಸುತ್ತೇನೆ."

ಈ ಕಥೆಯನ್ನು ಕೇಳಿದ ಒಡನೆಯೇ ಸನ್ಯಾಸಿಯು ಬಹಳ ಅನುತಾಪಪಟ್ಟು ಬೇಡನ ಧೈರ್ಯವನ್ನೂ ಪರಾಕ್ರಮವನ್ನೂ ಪರೋಪಕಾರ ಬುದ್ಧಿಯನ್ನೂ ಬಹಳವಾಗಿ ಹೊಗಳಿ, ಅವರಿಬ್ಬರಿಗೂ ತಮ್ಮಲ್ಲಿದ್ದ ಆಹಾರ ಪದಾರ್ಥಗಳಲ್ಲಿ ಕೊಂಚವನ್ನು ಕೊಟ್ಟು ಅವರ ಶ್ರಮಪರಿಹಾರವನ್ನು ಮಾಡಿದನು. ದೇಹಕ್ಕೆ ಒಳ್ಳೇ ಆರೋಗ್ಯವನ್ನು ಕೊಡುವುದೆಂದು ಹೇಳಿ ಒಂದು ವಿಧವಾದ ದ್ರವವಸ್ತುವನ್ನು ಸನ್ಯಾಸಿಯು ಬೇಡನಲ್ಲಿಕೊಟ್ಟು ಅದನ್ನು ಕುಡಿಯುವಂತೆ ಹೇಳಿದನು. ಬೇಡನು ಅದನ್ನು ಕುಡಿದ ಒಡನೆಯೇ ಗಾಢನಿದ್ರೆಯಲ್ಲಿ ಮುಳುಗಿದವನಾಗಿ ಗೊರಕೆಯನ್ನು ಬಿಡುತ್ತಾ ದೇಹದ ಮೇಲೆ ಎಚ್ಚರವಿಲ್ಲದೆ ಮಲಗಿದನು. ಪರ್ಣಶಾಲೆಯ ಒಳಗಿನ ಕೊಠಡಿಯೊಂದರ ಮೂಲೆಯಲ್ಲಿ ನಮ್ಮ ರಾಜಕುಮಾರಿಯು ಮಲಗಿಕೊಂಡಳು.

ಇವರುಗಳು ಮಲಗಿದಮೇಲೆ ಒಂದು ಘಂಟೆಯಕಾಲವು ಕಳೆಯಿತು. ಸನ್ಯಾಸಿಗಳು ಯೋಗನಿದ್ರೆಯಿಂದಿದ್ದವರು, ಸದ್ವಾಗದಂತೆ ಪರ್ಣಶಾಲೆ ಕೊಠಡಿಯಲ್ಲಿ ಮಲಗಿಕೊಂಡರು. ಅಲ್ಲಿ ಮಲಗಿದ್ದ ರೂಪವತಿಯ ಸಮೀಪದಲ್ಲಿ ಹೋಗಿನಿಂತು, ಅವಳನ್ನು ಶಾಂತವಾಗಿ ಕೂಗಿ ಎಬ್ಬಿಸಿದರು. ನಿದ್ರೆಯಿಂದ ಎಚ್ಚತ್ತು ಎದ್ದ ಸೌಂದರ್ಯವತಿಯು, ತನ್ನಮುಂದೆ ಮೊಣಕಾಲೂರಿ ನಿಂತಿರುವ ಸನ್ಯಾಸಿಯನ್ನು ಮಹಾಕೋಪದೊಡನೆ ನೋಡಿ, ಸಮಾಚಾರವೇನೆಂದು ಕೇಳಿದಳು. ಅದಕ್ಕೆ ಆ ಸನ್ಯಾಸಿಯು "ಎಲೈ ರೂಪವತಿಯೇ! ಹೃದಯರಮಣೀ! ನನ್ನ ಚಪಲಬುದ್ಧಿಗಾಗಿ ನನ್ನನ್ನು ನೀನು ಕ್ಷಮಿಸಬೇಕು. ನನ್ನ ಜೀವಿಕೆಯ ಕಾಲದಲ್ಲಿ ಇಷ್ಟುಸುಂದರಳಾದ ಸ್ತ್ರೀರತ್ನವನ್ನು ನಾನು ನೋಡಿದ್ದೇ ಇಲ್ಲವು. ಮನುಷ್ಯಜನ್ಮದಲ್ಲಿ ನಿನ್ನನ್ನು ಹೋಲತಕ್ಕವಳನ್ನು ಯಾರೂ ನೋಡಿರಲಾರರು. ನಿನ್ನ ರೂಪವನ್ನು ಎದುರಿಸಲು ಸಾಧ್ಯವಿಲ್ಲ. ಇದು ಸತ್ಯವು. ಬೆಲೆಕಟ್ಟಲು ಸಾಧ್ಯವಿಲ್ಲದ ಒಂದು ದೊಡ್ಡ ಐಶ್ವರ್ಯವು ನನ್ನ ಹತ್ತಿರದಲ್ಲಿರುವಾಗ, ನಾನು ಹೇಗೆತಾನೆ ಸುಮ್ಮನೆ

ಮೌನವಾಗಿರಲು ಸಾಧ್ಯವು?" ಎಂದು ಹೇಳಿದನು. ಒಡನೆಯೇ ಸತ್ಯಭಾಮೆ ಯು ಮಹಾಕೋಪದಿಂದ "ಎಲೋ ಅಧಮಾ! ಕಳ್ಳನೇ! ಇದುತಾನೆ ನಿನ್ನ ತಪಸ್ಸೂ ಧ್ಯಾನವೂ? ಇದೇಯೋ ನಿನ್ನ ಸನ್ಯಾಸದ ಲಕ್ಷಣವು? ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿಯು ಮಾಡುವ ಕೆಲಸವೇ ಇದು? ಛೀ ನೀಚಾ! ಹತ್ತಿರ ಬರಬೇಡ! ದೂರನಿಲ್ಲು ನೀಚಪ್ರಾಣಿಯೆ!" ಎಂದು ಸಿಂಹದ ಹಾಗೆ ಘರ್ಜಿಸಿದಳು. ಅದಕ್ಕೆ ಆ ವೇಷಗಾರ ಸನ್ಯಾಸಿಯು ಅವಳಲ್ಲಿ ನಮ್ರತೆ ಯಿಂದ "ನನ್ನ ಕಣ್ಮಣಿಯೆ! ಕೋಪವನ್ನುಮಾಡಬೇಡ; ನಾನು ಹೇಳುವು ದನ್ನು ಕೇಳಬೇಕು. ತಪಸ್ಸು ಮಾಡುವುದು ಮಹಾ ಕಷ್ಟವಾದ ಕೆಲಸವು. ಅದನ್ನು ನಾವು ಮಹಾಕಷ್ಟದಿಂದ ಸಹಿಸುತ್ತಿರುವೆವೇ ಹೊರತು, ಪ್ರೀತಿ ಯಿಂದಲೂ ಸಂತೋಷದಿಂದಲೂ ಅನುಭವಿಸುವೆವೆಂದು ನೀನು ಯೋಚಿಸ ಬೇಡ. ನಿಜವಾಗಿಯೂ ಈ ಲೋಕದಲ್ಲಿ "ವಿರಕ್ತತೆ" ಎಂಬುವುದೇ ಇಲ್ಲ. ನಾನು ಏಕೆ ಸನ್ಯಾಸಿಯಾದೆನು ಗೊತ್ತೋ? ಸಂಸಾರದಲ್ಲಿ ನನಗೆ ತಿರಸ್ಕಾ ರವುಂಟಾಯಿತು. ನನ್ನ ಹೆಂಡತಿಯು ನನ್ನನ್ನು ತಿರಸ್ಕರಿಸಿ ನನ್ನ ವಿರೋ ಧಿಯೊಬ್ಬನನ್ನು ಕಟ್ಟಿಕೊಂಡು ಓಡಿಬಿಟ್ಟಳು. ಆದರಿಂದ ಅವಮಾನವನ್ನು ಸಹಿಸಲಾರದೆ, ಜೀರೆದಾರಿ ಇಲ್ಲದೆ ಈ ವೇಷವನ್ನು ಮೇಲುಹಾಕಿಕೊಂಡೆ. ಮಾಣಿಕ್ಯವೇ! ನಾನು ಮಾಡಿದ ಭಾಗ್ಯವೇ ಭಾಗ್ಯವು. ದೇವರು ನಮ್ಮಿಬ್ಬರ ಸಂತೋಷವನ್ನು ಉದ್ದೇಶಿಸಿಯೇ ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದು ಬಿಟ್ಟರು. ಚಂದ್ರನು ಮನೋಹರವಾಗಿ ಪ್ರಕಾಶಿಸುತ್ತಾನೆ. ಎಚ್ಚರಿಕೆತಪ್ಪುವ ಮಧುವನ್ನು ಕುಡಿದುಬಿಟ್ಟು ಸ್ಮರಣೆ ಇಲ್ಲದೆ ಬೇಡನು ಬಿದ್ದುಕೊಂಡಿರುವ ನು. ನಾವಿಬ್ಬರೇ ಇಲ್ಲಿ ಪ್ರತ್ಯೇಕವಾಗಿರುತ್ತೇವೆ. ಆದುದರಿಂದಲೆ, ಸಾವಕಾಶ ವನ್ನು ಮಾಡದೆ ಈಕ್ಷಣವೇ ಸುಖಿಸೋಣ, ಬಾ ನನ್ನ ಕಣ್ಣೇ!" ಎಂದು ಹೇಳಿಕೊಂಡೇ ಅವಳ ಹತ್ತಿರಕ್ಕೆ ಹೋಗಿ ಅವಳ ಕೈಯನ್ನು ಹಿಡಿಯಲು ಯತ್ನಿಸಿದನು. "ನೀಚನೆ! ದುರಾತ್ಮನೆ! ದೂರನಿಲ್ಲು! ಹತ್ತಿರಬಂದರೆ ತಪ್ಪ ದೆ ಕೆಟ್ಟು ಹಾಳಾಗುವೆ" ಎಂದು ಸತ್ಯಭಾಮೆಯು ಕೋಪದಿಂದ ಹೇಳಿದಳು. ಒಡನೆಯೆ ಅಕಸ್ಮಾತ್ತಾಗಿ ಭಯಂಕರವಾದ ದೊಡ್ಡದಾದ ಕಾಳಸರ್ಪ ಒಂದು ಅಲ್ಲಿ ಕಾಣಿಸಿಕೊಂಡು ಸನ್ಯಾಸಿಯನ್ನು ಅಟ್ಟಿಸಿಕೊಂಡುಹೋಗಿ, ಕಾಡಿನ ಹೊರಕ್ಕೆ ಅವನನ್ನು ಅನುಸರಿಸಿಕೊಂಡು ಓಡಿತು. ಅವನು ಮುಂದೆಯೂ ಅವನಹಿಂದೆ ಸರ್ಪವೂ ಅನುಸರಿಸಿಹೋಗಲು. ಆ ಕಪಟ

ಸನ್ಯಾಸಿಯು ಸರ್ಪದಭಯದಿಂದಲೂ, ಓಡಿದ ದಣುವಿನಿಂದಲೂ ಶಕ್ತಿಗುಂದಿದವನಾಗಿ ನೆಲದಮೇಲೆ ಬಿದ್ದು ಮೂರ್ಛೆಹೋದನು.

ಮಾಯಗಾರ ಮುದಿಬೇಡನು ಪುನಃ ಹಳೆಯ ಕೃಷ್ಣನಾಗಿ ಕಾಣಿಸಿಕೊಂಡು, ಸತ್ಯಭಾಮೆಯ ಭುಜದಮೇಲೆ ಕೈ ಇಟ್ಟುಕೊಂಡು, ಅವಳ ಮುಖವನ್ನು ಸಂತೋಷದಿಂದ ನೋಡಿದನು. ಆನೋಟದ ಅಭಿಪ್ರಾಯವನ್ನು ತಿಳಿದುಕೊಂಡ ಸತ್ಯಭಾಮೆಯು, ಕೃಷ್ಣನ ಸುಂದರವಾದ ಕೈಗಳನ್ನು ತನ್ನ ಕಣ್ಣಿಗೆ ಒತ್ತಿಕೊಂಡು "ಎಲೈ ಪ್ರಾಣವಲ್ಲಭಾ! ನನ್ನ ಬುದ್ಧಿಹೀನತೆಯನ್ನು ಎಷ್ಟೆಂದು ಹೇಳೋಣ! ನಾನು ಶುದ್ಧ ಮೂಢಳೇ ಸರಿ! ಹೊರಗಿನ ಡಾಂಭಿಕತನವನ್ನೂ ವೇಷವನ್ನೂ ನೋಡಿ, ಬುದ್ಧಿಮೋಸ ಹೋಗಿದ್ದೆನು. ಹೆಂಡತಿಮಕ್ಕಳನ್ನು ಬಿಟ್ಟು ಅರಣ್ಯದಲ್ಲಿ ವಾಸಮಾಡಿದ ಮಾತ್ರದಿಂದಲೇ ಒಬ್ಬನು ನಿಜವಾದ ಸನ್ಯಾಸಿಯಾಗಲಾರನು." ಎಂದು ಹೇಳುತ್ತಿರುವಾಗಲೆ, ಶ್ರೀಕೃಷ್ಣನು ಇದ್ದಕ್ಕಿದ್ದಹಾಗೆಯೆ "ನನ್ನ ಪ್ರೇಮವೇ! ಸತ್ಯಭಾಮಾ! ನನ್ನನ್ನು ಹಿಡಿದುಕೊ! ಗಟ್ಟಿಯಾಗಿ ಅಲ್ಲಾಡದ ಹಾಗೆ ಹಿಡಿದುಕೋ! ಯಾವುದೋ ನನ್ನನ್ನು ಎಳೆಯುತ್ತದಲ್ಲ, ನನ್ನನ್ನುಬಿಡಬೇಡ! ಜಾಗ್ರತೆಯಾಗಿ ಹಿಡಿದುಕೊ. ಯಾವುದೊ ಅಪಾರವಾದ ಶಕ್ತಿಯೊಂದು ನನ್ನನ್ನು ಎಳೆದುಕೊಂಡು ಹೋಗುತ್ತಿದೆ! ಏನು ಮಾಡಲಿ? ಬಿಡಬೇಡ ಬಿಡಬೇಡ" ಎಂದು ಮೇಲೆ ಮೇಲೆ ಸತ್ಯಭಾಮೆಯನ್ನು ಗಟ್ಟಿಯಾಗಿ ಕಟ್ಟಿಕೊಂಡು ಕೂಗಿಕೊಂಡನು. ಅಕಸ್ಮಾತ್ತಾಗಿ ಕೃಷ್ಣನು ಹೀಗೆ ಹೇಳಲು, ಸತ್ಯಭಾಮೆಯು ಆಶ್ಚರ್ಯದಿಂದ ದಿಗ್ಭ್ರಮೆಗೊಂಡಳು! ಕೃಷ್ಣನಿಗೇನಾದರೂ ಹುಚ್ಚುಹಿಡಿಯಿತೊ? ಎಂದುಅನುಮಾನ ಪಟ್ಟಳು. ಆದರೂ ತನ್ನ ಪ್ರಾಣಪತಿಯ ಮಾತನ್ನು ನೆರವೇರಿಸುವ ಉದ್ದೇಶ್ಯದಿಂದ ಅವನನ್ನು ತನ್ನ ತೋಳುಗಳ ಸಂಧಿಯಲ್ಲಿ ಸಿಕ್ಕಿಸಿಕೊಂಡಳು. ಅಷ್ಟುಮಾಡಿದೊಂದೇತಡ; ಒಡನೆಯೇ ವಿದ್ಯುಚ್ಛಕ್ತಿಯ ಆವೇಶದಹಾಗೆ ಇವರಿಬ್ಬರೂ ಒಟ್ಟಿಗೇನೇ ಎಳೆಯಲ್ಪಟ್ಟರು. ಸತ್ಯಭಾಮೆಗೆಏಂದೂ ತೋರಲಿಲ್ಲ. ಯಾವ ಶಕ್ತಿಯು ತಮ್ಮನ್ನು ಎಳೆಯುತ್ತದೆ? ಎಲ್ಲಿಗೆ ಎಳೆದುಕೊಂಡು ಹೋಗುತ್ತದೆ? ಎಂಬುವು ಯಾವುದೊಂದು ಸತ್ಯಭಾಮೆಗೆ ತೋರದೆ, ಕೃಷ್ಣನನ್ನು ವಿನಯದಿಂದ ಕೇಳಿದಳು. ಅದಕ್ಕೆ ಅವನು ಅದೇನೋ ನನಗೇ ಗೊತ್ತಿಲ್ಲವಲ್ಲ! ಆ ಶಕ್ತಿಯಮುಂದೆ ನಿಂತು ಎದಿರಿಸುವುದಕ್ಕೆ

ನನಗೂ ಕೊಂಚವೂ ಬಲವಿಲ್ಲ. ಒಂದುವೇಳೆ ಯಾರೋ ಭಕ್ತನೊಬ್ಬನು ತನ್ನ ಭಕ್ತಿಯೆಂಬ ಹಗ್ಗದಿಂದ, ನನ್ನನ್ನು ತನ್ನಲ್ಲಿಗೆ ಎಳೆಯುವಹಾಗೆ ಕಾಣುವುದು. ನನ್ನ ................... ಸತ್ಯಭಾಮೆಯೆ ನೋಡಿದೆಯಾ ನನ್ನ ಕಷ್ಟವನ್ನು? ದೇವರಾಗಿ ಇರುವುದರಿಂದ ಎಷ್ಟು ಕಷ್ಟವನ್ನು ಅನುಭವಿಸಬೇಕಾಗಿರುವುದು ನೋಡು! ಎಂದು ಹೇಳುತ್ತಿರುವಾಗ, ಇವರಿಬ್ಬರೂ ಒಂದು ಅತ್ಯದ್ಭುತವಾದ ಅರಮನೆಯಮುಂದೆ ಬಂದು ಸೇರಿದರು. ಅರಮನೆಯ ಮುಂಭಾಗದ ನಂದನವನದಲ್ಲಿ ಬಹಳ ಪ್ರಕಾಶವನ್ನು ಕೊಡತಕ್ಕ, ಅತಿಶ್ಲಾಘ್ಯವಾದ ದೀಪಗಳು ಜ್ವಲಿಸಿಕೊಂಡಿರಲು, ವಿಚಿತ್ರವಾಗಿ ಶೃಂಗರಿಸಲ್ಪಟ್ಟ ಮಂಚದಲ್ಲಿ ದೇಹದಮೇಲೆ ಯಾವವಿಧವಾದ ಬಟ್ಟೆಯೂ ಇಲ್ಲದೆ, ಒಬ್ಬ ಯೌವನ ಸೌಂದರ್ಯಪುರುಷನು ರೇಷ್ಮೆಯ ತಲೆದಿಂಬಿನಮೇಲೆ ತಲೆಯನ್ನಿಟ್ಟುಕೊಂಡು ಮಲಗಿದ್ದನು. ಅವನನ್ನು ಸುತ್ತಿಕೊಂಡು ಇಪ್ಪತ್ತುವಯಸ್ಸಿಗೆ ಮೀರದ ಆರುಜನ ಒಳ್ಳೇ ರೂಪವತಿಗಳಾದ ಯುವತಿಯರು ನಿರ್ವಾಣರಾಗಿ, ಮನೋರಮ್ಯವಾಗಿ ಶೃಂಗಾರರಸದಿಂದ ತುಂಬಿದ ಹಾಡುಗಳನ್ನೇ ಹಾಡಿಕೊಂಡು "ರಾಸಮಂಡಲ"ವೆಂದು ಹೇಳಲ್ಪಡುವ ಒಂದು ದಿವ್ಯವಾದ ನರ್ತನವನ್ನು ನಟನೆಮಾಡುತ್ತಾ, ಅವನಿಗೆ ಮಹದಾನಂದವನ್ನುಂಟುಮಾಡುತ್ತಿದ್ದರು. ಈ ವಿನೋದವಾದ ದೃಶ್ಯವನ್ನು (ನೋಟವನ್ನು) ನೋಡಿದೊಡನೆಯೆ, ಸತ್ಯಭಾಮೆಯು ಬಹಳ ಪರಿಹಾಸದೊಡನೆ ಕೃಷ್ಣನನ್ನುಕುರಿತು "ಈ ಮಹಾ ಪುರುಷನು ತಾನೇ ನಿನ್ನ ಭಕ್ತಶಿರೋಮಣಿ!" ಎಂದು ತಿರಸ್ಕಾರದಿಂದ ಕೇಳಿದಳು. ಅದಕ್ಕೆ ಕೃಷ್ಣನು ಶಾಂತತೆಯಿಂದ, ನನ್ನಕಣ್ಣೆ! ಅವಸರಪಡಬೇಡ. ಕೊನೆಯವರೆಗೂ ಸಹನದಿಂದ ಗಮನಿಸುತ್ತಿರು. ಎಂದು ಹೇಳುತ್ತಲೆ ಹೋದನು. ಇವರುಗಳು ಬಂದದ್ದನ್ನು ನೋಡಿದೊಡನೆಯೆ, ಸೌಂದರ್ಯವತಿಯರಾದ ಆ ಕನ್ನಿಕೆಯರು ಆರುಜನರೂ ನಿರ್ವಾಣರಾಗಿದ್ದುದರಿಂದ ಲಜ್ಜೆಯಿಂದ ಆತುರಪಟ್ಟು ಒಳಗೆ ಹೋಗಿ ಅವಿತುಕೊಂಡರು. ಯೌವನ ಪುರುಷನು ಮಾತ್ರ ತಾನು ಮಲಗಿದ್ದ ಮಂಚವನ್ನು ಬಿಟ್ಟು ಇಳಿದು ತನ್ನ ವಸ್ತ್ರವನ್ನುಟ್ಟುಕೊಂಡು ಅವಸರದಿಂದ ಓಡಿ ಬಂದು ಕೃಷ್ಣ ಪರಮಾತ್ಮನ ಪಾದಕಮಲಗಳಲ್ಲಿ ತನ್ನ ತಲೆಯನ್ನಿಟ್ಟು ಅಧಿಕ ಮರ್ಯಾದೆಯೊಡನೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ "ಮಹಾಪ್ರಭೋ! ಸರ್ವಲೋಕಶರಣ್ಯಾ! ಆಪದ್ಬಾಂಧವಾ!

ಅನಾಥರಕ್ಷಕ! ಪ್ರಪಂಚವೆಲ್ಲವನ್ನೂ ಸೃಷ್ಟಿಸಿ ರಕ್ಷಿಸುವ ದೇವನೇ! ಬರಬೇಕು. ಹುಲ್ಲಿಗೆ ಸಮಾನನಾದ ನನ್ನಲ್ಲಿ ಇಷ್ಟು ಕೃಪೆಯಿಟ್ಟು ಬಂದುದಕ್ಕೆ ನಾನು ಸ್ವಲ್ಪವೂ ಪಾತ್ರನಲ್ಲ. ಅಗಾಧನಾದ ನಿಮ್ಮ ದಯಾಳು ಗುಣದ ಮುಂದೆ ನನ್ನ ತಪಸ್ಸೂ ಧರ್ಮವೂ ಶೂನ್ಯವೇ ಅಲ್ಲವೇ? ಎಲ್ಲೆಯಿಲ್ಲದ ನಿಮ್ಮ ಶಕ್ತಿಯನ್ನೂ ಕೃಪೆಯನ್ನೂ, ನನ್ನ ಅಲ್ಪವಾದ ಮಾತುಗಳು ಹೇಗೆ ಹೊಗಳಲು ಸಾಧ್ಯ? ಪ್ರಪಂಚವೆಲ್ಲವೂ ನಿಮ್ಮದಾಗಿಯೂ, ನೀವಾಗಿಯೂ ಆಗಿರುವಾಗ ನಾನು ಬೇರೆಂತಲೂ ನೀವು ಬೇರೆಂತಲೂ ಉಂಟೋ? ಪರಬ್ರಹ್ಮನಾಗಿರುವ ನೀವು ರೂಪಿ– ಅರೂಪಿ, ನಾಮವುಳ್ಳವರು– ನಾಮವಿಲ್ಲದವರು. ಮನುಷ್ಯರ ಹಾಗೆ ಈಗ ಕಾಣುವ ನೀವು ಸೂಕ್ಷ್ಮವಾಗಿ ಯೋಚಿಸುವಾಗ ಅನಿರ್ವಚನೀಯವಾದ ಜ್ಯೋತಿಯಾಗಿ ಪ್ರಕಾಶಿಸುವಿರಿ. ನಾನು ಹೇಗೆ ನಿಮ್ಮನ್ನು ಸ್ತೋತ್ರ ಮಾಡಲಿ? ನಾನು ಅಪೇಕ್ಷಿಸುವುದು ಏನೂ ಇಲ್ಲವಲ್ಲ. ಆದರೂ ಸಚ್ಚಿದಾನಂದಸ್ವರೂಪಿಯಾದ ನಿಮ್ಮನ್ನು, ನೀವು ಹೇಗೆ ಇರುವಿರೊ ಹಾಗೆಯೆ ನಾನು ತಿಳಿಯುವ ಹಾಗೆ ಅನುಗ್ರಹ ಮಾಡಬೇಕು" ಎಂದು ಆನಂದಬಾಷ್ಪವನ್ನು ಸುರಿಯುತ್ತಿರಲು, ಸ್ತೋತ್ರ ಮಾಡಿದನು. ಒಡನೆಯೆ ಶ್ರೀ ಕೃಷ್ಣನೂ ಆ ಯೌವನ ಪುರುಷನೂ ಆಲಿಂಗನ ಮಾಡಿಕೊಳ್ಳಲು ಆರಂಭಿಸಿದರು. ಆ ಕ್ಷಣವೇ ಮಹಾಜ್ಯೋತಿಯೊಂದು ಅಲ್ಲಿ ತೋರಿತು. ಸತ್ಯಭಾಮೆಗೆ ಅಲ್ಲಿ ಆಗ ಒಂದೂ ತೋರಲಿಲ್ಲ. ತನ್ನ ಪತಿಯಾದ ಕೃಷ್ಣನಾಗಲಿ ಅಥವಾ ಯೌವನ ಪುರುಷನಾಗಲಿ ಕಾಣಬರಲಿಲ್ಲ. ಒಂದೇ ಜ್ಯೋತಿ. ಒಂದೇ ಆನಂದ. ಒಂದು ನಿಮಿಷಕಾಲ ಇದನ್ನು ಯೋಚಿಸಿದ ಸತ್ಯಭಾಮೆಯು ಮರುನಿಮಿಷದಲ್ಲಿಯೆ ಮೂರ್ಛೆ ಹೋದಳು. ಎರಡು ಮೂರು ಘಂಟೆಗಳು ಕಳೆದುವು. ಸತ್ಯಭಾಮೆಯು ಸ್ವಪ್ನದಿಂದ ಎಚ್ಚೆತ್ತವಳ ಹಾಗೆ ಎದ್ದಳು. ಎದ್ದವಳು ಮೊದಲಿನಂತೆಯೆ ತಾನು ಪತಿಯಾದ ಕೃಷ್ಣನನ್ನು ಒಡಗಿಕೊಂಡಿರುವುದನ್ನು ನೋಡಿದಳು. "ಎಲೋ ಕಳ್ಳಾ! ಮಾಯವೇಷ ಶಿರೋಮಣಿ! ನಿನಗೆ ನಮಸ್ಕಾರಗಳು! ಸತ್ಯಭಾಮೆಯು ಸನ್ಯಾಸವನ್ನು ಇಂತಹುದೆಂದು ತಿಳಿಯಲಿ! ಎಂದು ನನಗೆ ಬೋಧಿಸುವುದಕ್ಕೋಸ್ಕರ ಈ ವೇಷವೆಲ್ಲವನ್ನೂ ಹಾಕಿಕೊಂಡೆಯಲ್ಲವೇ? ಹೆಂಡತಿ ಮಕ್ಕಳನ್ನು ಶರೀರ ಮಾತ್ರದಿಂದಲೆ ಬಿಟ್ಟು ತ್ಯಾಗ ಮಾಡಿ ಕಾಡಿಗೆ ಓಡುವುದು ನಿಜ

ವಾದ ಸನ್ಯಾಸವಲ್ಲ. ಮನಸ್ಸಿನಿಂದ ತ್ಯಾನಿಸುವುದೇ ನಿಜವಾದದ್ದು. ತ್ಯಾಗ ಮಾಡಬೇಕಾದುವುಗಳು ಚಿತ್ತಚಲನಗಳಾದ ಕೋಪ, ಆಶೆ, ಮಾತ್ಸರ್ಯ ಇವೇ ಮೊದಲಾದುವುಗಳು. ಪರಬ್ರಹ್ಮವನ್ನು ಇದ್ದ ಹಾಗೆಯೆ ತಿಳಿದು, ಪ್ರಪಂಚ ವಿಷಯ ಸುಖಗಳಲ್ಲಿ ಇರುವ ಸಂಬಂಧ ವೆಲ್ಲವನ್ನೂ ಬಿಟ್ಟು ಅಭೇದಜ್ಞಾನವನ್ನು ಹೊಂದಿ ಸಚ್ಚಿದಾನಂದಸ್ವರೂಪ ನನ್ನು ಯಾವನು ಸದಾ ಅನುಭವಿಸುವನೋ ಅವನೇ **ಸತ್ಯಸನ್ಯಾಸಿಯು.** ಇತರರ ಕಣ್ಣಿಗೆ ಕಾಣುವಂತೆ ಮಾತ್ರ ಹೆಂಡತಿಮಕ್ಕಳನ್ನು ಬಿಟ್ಟು ಬಿಟ್ಟು ಕಾಡಿನಲ್ಲಿ ವಾಸಮಾಡಿಕೊಂಡಿದ್ದ ಕಪಟ ಸನ್ಯಾಸಿಯು ಮಹಾಪಾಪಿಯು. ಅವನ ಮನಸ್ಸು ಕಾಮಕ್ರೋಧಗಳಲ್ಲಿಯೆ ಕೂಡಿ ಹೋಯಿತು. ಆದರೆ ಸ್ತ್ರೀಯರ ಮಧ್ಯದಲ್ಲಿ ಸಂಭಾಷಿಸುತ್ತಿದ್ದ ಪುರುಷನೋ, ನಿಜವಾಗಿ ನಿನ್ನನ್ನು ತಿಳಿದು ಜ್ಞಾನಾಮೃತವಚನಗಳನ್ನು ತಾನು ಅನುಭವಿಸಿದ ರೀತಿ ಯಲ್ಲಿಯೇ ಹೊರಗೆಡವಿದನು. ಕಪಟಸನ್ಯಾಸಿಯೋ ನಿನ್ನನ್ನು ಕಂಡು, ಭಯಪಟ್ಟು ಓಡಿಹೋದನು. ಯೌವನ ಪುರುಷನೋ ತನ್ನ ಭಕ್ತಿಪ್ರೇಮ ಗಳಿಂದ ನಿನ್ನನ್ನು ತನ್ನಲ್ಲಿಗೆ ವಿದ್ಯುಚ್ಛಕ್ತಿಯ ಶಕ್ತಿಯ ಹಾಗೆ ಎಳೆದು ಕೊಂಡನು. ಇದೀಗ ಸತ್ಯಸನ್ಯಾಸದ ದಿವ್ಯಲಕ್ಷಣವು" ಎಂದು ಸೌಂದರ್ಯ ವತಿಯಾದ ಸತ್ಯಭಾಮೆಯು ಮುಗುಳುನಗೆಯೊಡನೆ ಹೇಳಿದಳು.

ವಾಚಕರೆ! ಎಲ್ಲವನ್ನೂ ಓದಿದಿರಷ್ಟೆ! ಇದನ್ನು ಓದಿದಒಡನೆಯೆ ನನಗೆಷ್ಟೋ ಆನಂದವೂ ವಿವೇಕವೂ ಉಂಟಾಯಿತು. ಕೂಡಲೆ ನಾನು ನನ್ನ ಹೆಂಡತಿಯನ್ನು ಕುರಿತು "ನಾನು ನನ್ನ ಸಂಕಲ್ಪವನ್ನು (ಹಿಂದೆ ಹೇಳಿ ರುವಂತೆ) ಬಿಡುವವನಲ್ಲ. ನೀನೂ ನನ್ನನ್ನು ಅನುಸರಿಸಬೇಕೆಂದಿದ್ದರೆ– ನಿನ್ನ ಮೈಮೇಲಿರತಕ್ಕ ಅವಶ್ಯಕವಾದ ಕೆಲವು ಆಭರಣಗಳನ್ನಿಟ್ಟು ಕೊಂಡು ಮಿಕ್ಕಒಡವೆಗಳೆಲ್ಲವನ್ನೂ ಮಾರಿ ಬಡ್ಡಿಗೆ ಹಾಕಿಬಿಡೋಣ. ಆ ಹಣವು ಮಕ್ಕಳ ವಿದ್ಯಾಭ್ಯಾಸ ಮದುವೆ .....ಇತ್ಯಾದಿಗಳಿಗೆ ಅನು ಕೂಲವಾಗುವುದು. ಊಟಮಾಡುವುದಕ್ಕಂತೂ ಭತ್ತವು ಬಂದೇ ಬರು ವುದು. ಈಗಿರತಕ್ಕ (ಸೊಸೈಟಿಯಲ್ಲಿ) ರೂಪಾಯಿಗಳ ಬಡ್ಡಿಯಿಂದ ಮೇಲ್ಖ ರ್ಚನ್ನೂಮಾಡಿಕೊಳ್ಳಬಹುದು" ಎಂದು ಹೇಳಿದೆ. ಇಷ್ಟು ಹೇಳಿದ ಮೇಲೆ ಅವಳಾದರೂ ಏನುಮಾಡುವಳು? ಪತಿಯನ್ನು ಬಿಟ್ಟರಲು ಅವ

ಳಿಗೆ ಸಾಧ್ಯವಾಗಲಿಲ್ಲ. ಅವಳು ಈಗಿನಕಾಲದವಳೇ ಆದರೂ ಇಪ್ಪತ್ತು ವರ್ಷಕ್ಕೆ ಮುಂಚೆ ಹುಟ್ಟಿದವಳಾದುದರಿಂದ (up to date civilized people) ಈಗಿನ ನವನಾಗರಿಕರಂತೆ, ಪತಿಯನ್ನು ಬಿಟ್ಟೇ ಬಿಟ್ಟಿರಲು ಮನಸ್ಸು ಬರಲಿಲ್ಲ. ಆದುದರಿಂದ ಅವಳಿಗೆ ನಾನು ಹೇಳಿದಂತೆಮಾಡು ವುದು ಕಷ್ಟವಾದರೂ ಕೂಡ ಹಾಗೆಯೇಮಾಡಿದಳು. ಅನಂತರ ನಾನು ಪಟ್ಟಣವಾಸಬಿಟ್ಟು ಒಂದು ಸಣ್ಣ ತಾಲೂಕಿನ ಮುಖ್ಯಸ್ಥಳದಲ್ಲಿ ಮನೆ ಮಾಡಿಕೊಂಡು ನನ್ನ ಹಿಂದಿನ ಕಷ್ಟಗಳೊಂದೂ ಇಲ್ಲದೆ ಭಗವಂತನ ಧ್ಯಾನಮಾಡುತ್ತಾ ಈಗ ಸುಖವಾಗಿರುತ್ತೇನೆ.

ವಾಚಕರೆ! ಇನ್ನೇನು? ಮತ್ತೊಂದು ವಿಷಯವನ್ನು ನಾವು ಅಗ ತ್ಯಹೇಳಬೇಕಲ್ಲವೇ? ಅದೇನೆನ್ನುವಿರೋ? ಆ ದಯಾಳುವಾದ, ಕೃಪಾ ಸಮುದ್ರನಾದ, ಭಕ್ತವತ್ಸಲನಾದ ಆ ಪರಮಾತ್ಮನ ಸಂವಿಧಾನವೇ! ಆಹಾ! ಅವನ ಸಂವಿಧಾನವು ಎಂತಹುದು? ಯಾರೂ ಯೋಚಿಸಿರ ಬಾರದು. ಯಾರಿಗೂ ಹೇಗಾಗುವುದೆಂದು ಯೋಚಿಸಲೂ ಬಾರದು. ಯಾವಾಗ ಎಲ್ಲಿ ಹೇಗಾಗುವುದೆಂಬದೂ ಗೊತ್ತಾಗಬಾರದು. ಇಂತಹು ದಲ್ಲವೆ ಅವನ ಸಂವಿಧಾನವು! ನೋಡಿರಿ. ಅವನು ನಮಗೆ ಕೊಡುವ ಕಷ್ಟಗಳೆಲ್ಲವೂ ನಮ್ಮಗಳ ಸುಖಕ್ಕಾಗಿಯೆ! ಆದರೆ ನಾವು ಅದನ್ನು ಹೇಗೆ ತಿಳಿದುಕೊಳ್ಳಬೇಕು? ಹಾಗೆ ತಿಳಿಯುವ ಶಕ್ತಿಯು ನಮಗಿದ್ದಿದ್ದರೆ ಹೀಗೇಕೆ ನಾವು ಕಷ್ಟಪಡುತ್ತಿದ್ದೆವು? ಬಲ್ಲವನೇ ಬಲ್ಲ ಬೆಲ್ಲದ ಸವಿಯ" ಎಂಬಂತೆ ಅವನ ಮಹಿಮೆಯನ್ನು ತಿಳಿದವರಿಗೇ ಅದುಗೊತ್ತು. ನೋಡಿರಿ! ಉದಾಹರಣೆಗಾಗಿ ನನ್ನನ್ನೆ ತೆಗೆದುಕೊಳ್ಳುವಾ! ನನ್ನ ಹಿಂದಿನ ಸರ್ಕಾರಿ ಕೆಲಸಗಳಲ್ಲಿ ಒಂದಕ್ಕಿಂತ ಒಂದರಲ್ಲಿ ಹೆಚ್ಚುತೊಂದರೆಯನ್ನೂ ಕೊಟ್ಟನು. ಆಗಲೆ ನಾನು ಸರ್ಕಾರಿಕೆಲಸವನ್ನೆ ಈಗಿನಂತೆ ಬಿಟ್ಟುಬಿಡಬಹುದಾಗಿದ್ದಿತು. ಆದರೂ ನನಗೆ ಆಗ ತೋರಲಿಲ್ಲ. ಆ ಮೇಲೆ ಪುನಃ ನನ್ನನ್ನು ಸುಖ ವಾಗಬಹುದೆಂಬ ಭಾವನೆಯಿಂದ ಇಂಜನಿಯರಿಂಗ್ ಕೆಲಸಕ್ಕೆ ಪ್ರವೇಶ ಮಾಡಿಸಿದನು. ಅನಂತರ ನನ್ನನ್ನು ಉದ್ಧಾರಮಾಡಬೇಕೆಂದು ಯೋ ಚಿಸಿ ಹಿಂದೆಹೇಳಿದಂತೆ ಬಹಳದೊಡ್ಡಕಷ್ಟವನ್ನು ಈ ಕೆಲಸದಲ್ಲಿಯೂ ತಂದಿಟ್ಟನು. ಈ ಪ್ರಬಲವಾದ ಕಷ್ಟವು ಬಂದದ್ದರಿಂದಲೆ ನಾನು ವೈರಾ

ಗ್ಯವನ್ನು ತಾಳಲು ಅವಕಾಶವಾದಂತಾಯಿತು. ನೋಡಿದಿರಾ! ಹೀಗೆ ಆ ಪರಮಾತ್ಮನು ಪ್ರಬಲವಾದ ಕಷ್ಟವನ್ನುತಂದಿಟ್ಟಿದ್ದರಿಂದಲ್ಲವೇ ನಾನು ವೈರಾಗ್ಯವನ್ನು ಪಡೆದುದು? ಆ ಕಷ್ಟವು ಬರದಿದ್ದರೆ ನಾನು ಆ ಕೆಲಸವನ್ನು ಇನ್ನೂ ಬಿಡದೆ ಆಗಾಗ್ಯೆ ನರಳುತ್ತಿರಬೇಕಾಗುತ್ತಿತ್ತು. ಇರಲಿ; ಅವನ ಮತ್ತೊಂದು ಸಂವಿಧಾನವನ್ನು ಹೇಳುತ್ತೇನೆ. ಕೇಳಿರಿ.– ಹಿಂದೆ ಹೇಳಿರುವಂತೆ ನಾನು ಕೆಲಸವನ್ನು ಬಿಟ್ಟುಬಿಡುತ್ತೇನೆಂದು ಮನೆಯವರಲ್ಲಿ ಹೇಳಿದಾಗ ಅವರು ನನ್ನನ್ನು ಬಹಳ ಬೇಜಾರುಪಡಿಸಲಿಲ್ಲವೆ? ಆಗ ನಾನು ಅವರೆಲ್ಲರನ್ನೂ ಬಿಟ್ಟು ಎಲ್ಲಿಗಾದರೂ ಹೋಗಿಬಿಡಬೇಕೆಂದು ಯೋಚಿಸಿದೆ. ಆಗ ಆ ಪರಮಾತ್ಮನು, ನಾನು ಊರುಬಿಟ್ಟುಹೋಗಿ ಅನ್ಯಾಯವಾಗಿ ಇಲ್ಲದ ಸಲ್ಲದ ಕಷ್ಟಗಳನ್ನನುಭವಿಸ ಬೇಕಾಗುತ್ತದಲ್ಲಾ ಎಂದು ಯೋಚಿಸಿ, ನಾನು ಮೇಲೆ ಹೇಳಿದಂತೆ ಯೋಚಿಸುವ ವೇಳೆಗೆ ಸರಿಯಾಗಿ "ಆ ಜನೋಪಕಾರಿ" ಎಂಬ ತಮಿಳುಮಾಸ ಪತ್ರಿಕೆಯು ನನ್ನ ಕೈಗೆ ಬರುವಂತೆ ಮಾಡಿದನು. ನೋಡಿರಿ! ಅವನ ಚಮತ್ಕಾರವನ್ನು!! ಇದೇ ಮಾಸಪತ್ರಿಕೆಯು ಒಂದು ಘಂಟೆ ಹಿಂದಾಗಿ ಬಂದಿದ್ದರೂ ಮೊದಲೇ ಬಂದಿದ್ದರೂ ನನಗೆ ಈಗಾದಪ್ರಯೋಜನವುಮಾತ್ರ ಖಂಡಿತ ಆಗುತ್ತಲೇ ಇರಲಿಲ್ಲ. ಹಾಗೆಮಾಡದೆ ನನ್ನನ್ನು ಉದ್ಧಾರಮಾಡಬೇಕೆಂದೇ ಆರೀತಿ ಸಂವಿಧಾನವನ್ನು ಮಾಡಿದನು. ಹೀಗೆಯೆ ಆ ಪರಮಾತ್ಮನು ನಮಗೆ ಉಂಟುಮಾಡತಕ್ಕ ಕಷ್ಟಗಳೆಲ್ಲವನ್ನೂ ನಮ್ಮ ಉದ್ಧಾರಕ್ಕಾಗಿಯೇ ಮಾಡುತ್ತಾನೆಂದು ತಿಳಿಯಬೇಕು.

ವಾಚಕರೆ! ಇನ್ನೇನು? ನೀವು ಇಷ್ಟುಹೊತ್ತು ಎಷ್ಟೋ ವಿಷಯಗಳನ್ನು ತಿಳಿದುಕೊಂಡಿರಿ! ನನ್ನ ಅನುಭವಗಳೆಲ್ಲವನ್ನೂ ತಿಳಿದುಕೊಂಡಿರಿ! ನಿಜವಾದ ಸೌಖ್ಯವೆಂದರೆ ಏನೆಂಬದನ್ನೂ, ಸತ್ಯಸನ್ಯಾಸವೆಂದರೆ ಏನೆಂಬದನ್ನೂ ತಿಳಿದುಕೊಂಡಿರಿ. ದುಡ್ಡಿದ್ದಮಾತ್ರಕ್ಕೆ, ಅಧಿಕಾರವಿದ್ದಮಾತ್ರಕ್ಕೆ, ಪತ್ನೀಪುತ್ರರಿದ್ದಮಾತ್ರಕ್ಕೆ ಸುಖಉಂಟಾಗಲಾರದೆಂದು ತಿಳಿದುಕೊಂಡಿರಿ! ಇನ್ನೂ ಎಷ್ಟೋ ನೀತಿ ವಿಷಯಗಳನ್ನೂ ಆ ಪರಮಾತ್ಮನ ಸಂವಿಧಾನಗಳನ್ನೂ ತಿಳಿದುಕೊಂಡಿರಿ! ನಾನು ನನ್ನ ಅನುಭವಗಳನ್ನೆಲ್ಲಾ ಹೇಳಿದೆನು. ನೀವೂ ಅದನ್ನು ಶಾಂತತೆಯಿಂದ ಕೇಳಿ

ದಿರಿ. ಇವಿಷ್ಟೂ ನನ್ನ ಸ್ವಂತಕ್ಕೆ ಸಂಬಂಧಪಟ್ಟವು. ಇನ್ನೂ ನನ್ನ ಹೆಂಡತಿಮಕ್ಕಳ ವಿಷಯದಲ್ಲಿ ಹೇಳಬೇಕಾದದ್ದು ಎಷ್ಟೋ ಇತ್ತು. ನಿಮಗೂ ಆಗಲೇ ಬೇಜಾರಾದ್ದರಿಂದ ಅದೆಲ್ಲವನ್ನೂ ಬಿಟ್ಟುಬಿಟ್ಟೆ. ಅಲ್ಲದೆ ಆ ವಿಷಯಗಳೆಲ್ಲವೂ ಸಾಮಾನ್ಯವಾಗಿ ನಿತ್ಯಗಟ್ಟಲೆಯಲ್ಲಿ ನಿಮ್ಮ ಅನುಭವದಲ್ಲಿಯೆ ಇವೆಯಲ್ಲವೇ? ಅಲ್ಲದೆ ನನ್ನ ಈಗಿನ ಸ್ಥಿತಿಯು ಹಿಂದೆ ಹೇಳಿದಂತೆ ಮಾರ್ಪಟ್ಟಿರುವುದರಿಂದ ನಿಮ್ಮಲ್ಲಿ ಏನನ್ನೂ ಹೇಳಿಕೊಳ್ಳಬೇಕಾಗಿಯೆ ಇಲ್ಲ. ಇಲ್ಲದಿದ್ದ ಪುನಃ ನಿಮ್ಮಲ್ಲಿ ನನ್ನ ಸಂಸಾರದ ಇತರ ವಿಷಯಗಳನ್ನು ಹೇಳಿಕೊಳ್ಳುತ್ತಿದ್ದೆನೋ ಏನೋ! ಈಗ ಅಂತಹುದೇನೂ ಇಲ್ಲ. ಈಗ ನಾನು ಎಲ್ಲಕ್ಕೂ ಸಿದ್ಧ. ಯಾವುದಕ್ಕೂ ಲಕ್ಷ್ಯಮಾಡುವಂತಿಲ್ಲ. ಇತರರ ಕಣ್ಣಿಗೆ ಮಹಾ ಭಯಂಕರವಾಗಿ ಸಹಿಸಲಸಾಧ್ಯವಾದ ಯಾವ ವ್ಯಸನವು ನನಗೊದಗಿದರೂ ಅದನ್ನು ನಾನು ಮನಸ್ಸಿಗೆ ತರುವವನೇ ಅಲ್ಲ. ಈ ಕ್ಷಣ ಬೇಕಾದರೂ ಈ ಲೋಕವನ್ನು ಬಿಡುವುದಕ್ಕೂ ಸಿದ್ಧ. ಇನ್ನೂ ನೂರು ವರ್ಷಗಳು ಇರುವುದಕ್ಕೂ ಸಿದ್ಧ. ಎಲ್ಲಕ್ಕೂ ಸಿದ್ಧವೇ! ಈಗೇನು ನನಗೆ ಯಾವಾಗಲೂ ಆನಂದವೇ. ಎಲ್ಲದರಲ್ಲಿಯೂ ಆನಂದವೇ. ಅಷ್ಟೇನು? ಒಟ್ಟಿನಲ್ಲಿ ನಾನೇ ಒಬ್ಬ ಆನಂದಮೂರ್ತಿಯೆಂತಲೇ ಹೇಳಬೇಕು. ನೀವೂ ಹೀಗೆಯೆ ಆನಂದಪಡಬೇಕೆಂದಿದ್ದರೆ. ನಾನು ಹಿಂದೆ ಹೇಳಿರುವಂತೆ ನಡೆದುಕೊಳ್ಳಿರಿ. ಆಗ ನೀವೂ ನನ್ನಂತೆಯೆ ಆಗುವಿರಿ.

ಇನ್ನೇನು? ಆನಂದವಾಯಿತೆಂದರೆ ನಾವು ಹೇಳುವ ಮಾತೇನು?

**ಸರ್ವೇಜನಾಸ್ಸುಖಿನೋಭವಂತು ಸಮಸ್ತಸನ್ಮಂಗಳಾನಿಭವಂತು**

**ಭದ್ರಂ — ಶುಭಂ — ಮಂಗಳಂ.**

ಆಗಲಿ! ಎಷ್ಟಿದೆಯೋ ಅಷ್ಟೂ ಆಗಿ ಹೋಗಲಿ.




Printed by P. N. Prabhu, at the Prabhakara Press, Udipi.